# ಸಿದ್ಧಗಂಗಾ


ಸಂಪುಟ-33 ಸಂಚಿಕೆ-12 ಡಿಸೆಂಬರ್ - 1997


## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅರಿವು ಆಚಾರಗಳ ಶಿವತೇಜ ಶ್ರೀಶಾಂತ
ವರಗುರುವೆ ಕರುಣಾಳು ನನ್ನತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

❖ ❖ ❖

ಬಸವ ಭಕ್ತಿಯ ಭಾನೆ ಎಸೆವ ಶಿವರೂಪವೆ
ಬಸೆದು ದಾಸೋಹವ ನಡೆಸಿರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

❖ ❖ ❖

ಬಂಜೆ ಭೂಮಿಯನೆಲ್ಲ ಬಂಗಾರ ಮಾಡಿದೆ
ಬಂಜೆ ಹೃದಯಗಳ ಜಲಗೈದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

❖ ❖ ❖

- ಹೆಚ್.ವಿ. ವೀರಭದ್ರಯ್ಯ

# ಒಳಪುಟಗಳಲ್ಲಿ.........





## ಶ್ರೀವಾಣಿ

### ಪೂಜೆ

ಮಾನವ ಭೂಮಿಯ ಮೇಲೆ ಬದುಕುಲಾರಂಭಿಸಿದ ಮೇಲೆ ತನ್ನನ್ನು ಸಂರಕ್ಷಿಸುತ್ತಿರುವ ಅವ್ಯಕ್ತ ಶಕ್ತಿಯನ್ನು, ದೇವರು ಎಂಬ ಭಾವನೆಯಿಂದ ಪೂಜಿಸುತ್ತಲೇ ಬಂದಿದ್ದಾನೆ. ಜಗತ್ತಿನ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಧರ್ಮಗಳಲ್ಲಿ ಪೂಜೆಯ ವಿಧಾನ ಭಿನ್ನ ಭಿನ್ನವಾಗಿರುವುದನ್ನು ಕಾಣಬಹುದು. ಪೂಜೆಯಲ್ಲಿ ಉಗ್ರಪೂಜೆ, ಸೌಮ್ಯ ಪೂಜೆಗಳೆಂದು ಎರಡು ವಿಧಾನಗಳನ್ನು ಗುರುತಿಸಿದ್ದಾರೆ. ಬಲಿ ಕೊಡುವುದು, ಹರಕೆ ಒಪ್ಪಿಸುವುದು ಮುಂತಾದವುಗಳು ಉಗ್ರಪೂಜೆ ಎನಿಸಿದರೆ, ಚಿತ್ತಶುದ್ಧಿಗಾಗಿ, ಆತ್ಮನ ಅರಿವಿಗಾಗಿ ಮಾಡುವುದು ಸೌಮ್ಯವೆಂದಾಗುತ್ತದೆ. ಅರ್ಚನ, ಪ್ರಾರ್ಥನೆ, ಧ್ಯಾನ ಇವುಗಳು ಪೂಜೆಯ ಮೂರು ವಿಧಗಳು. ದೈಹಿಕವಾದುದು ಅರ್ಚನ, ಮಾತಿನಿಂದ ಮಾಡುವುದು ಪ್ರಾರ್ಥನೆ, ಮನದ ಪೂಜೆ ಧ್ಯಾನ. ಪೂಜಿಸುವ ಹಂತಗಳೂ ಬೇರೆ ಬೇರೆಯಾಗಿವೆ. ಸಾಧಕನ ಮನಸ್ಸಿನ ಹಂತವನ್ನು ಅನುಸರಿಸಿ ಅವು ರೂಪಿತವಾಗಿವೆ.

ಭೂತಪೂಜೆಯ ಮೂಲಕ ನೀರು, ನೆಲ, ವೃಕ್ಷಗಳನ್ನು ಪೂಜಿಸುವುದು, ಎತ್ತು, ಹಸು, ಆನೆ, ಕುದುರೆಗಳ ಪೂಜಿಸುವ ಪ್ರಾಣಿಪೂಜೆ, ಹಿರಿಯರನ್ನು ಆರಾಧಿಸುವ ಪಿತೃಪೂಜೆ, ರಾಮ, ಕೃಷ್ಣ ಶಿವ, ರುದ್ರರನ್ನೂ ಪೂಜಿಸುವ ದೇವತಾ ಪೂಜೆ, ಬುದ್ಧ, ಬಸವ, ಕ್ರಿಸ್ತರನ್ನೂ ಪೂಜಿಸುವ ವಿಭೂತಿ ಪೂಜೆ, ಅಲ್ಲಾ, ಲಿಂಗ ಮುಂತಾಗಿ ಪೂಜಿಸುವ ದೇವಪೂಜೆ - ಹೀಗೆ ಪೂಜಿಸುತ್ತಾರೆ. ಎಲ್ಲಕ್ಕೂ ಮೇಲ್ತರದ್ದು ದೇವಪೂಜೆಯೆನಿಸಿದ ಲಿಂಗಪೂಜೆ. ವೀರಶೈವರಲ್ಲಂತೂ ಇಷ್ಟಲಿಂಗ ಪೂಜೆ ಸರ್ವಶ್ರೇಷ್ಠವಾದುದು. ಷಟ್‌ಸ್ಥಲ ಸಿದ್ಧಾಂತ ಅಡಿಪಾಯವೇ ಇಷ್ಟಲಿಂಗೋಪಾಸನೆ. ಇಷ್ಟಲಿಂಗ ಸ್ಥಾವರಲಿಂಗದಂತಲ್ಲ, ದೇವಾಲಯದಲ್ಲಿ ಸ್ಥಾಪಿತವಾದುದಲ್ಲ, ಭಕ್ತನ ದೇಹದ ಮೇಲೆ ಸದಾ ನಿವಾಸಿಯಾಗಿದ್ದು ಮಂಗಳಪ್ರದಾಯಕವಾದದ್ದು. ಅದು ಸದ್ಗುರುವಿನಿಂದ ಪ್ರಾಪ್ತವಾದ ಭಕ್ತನ ಅಂತರಂಗದ ಚತ್ಕಳೆ. ಅರುಹಿನ ಕುರುಹು.

ಪೂಜೆ ಏಕೆ ಎಂದರೆ ತನಗೆ ಮನುಷ್ಯ ಜನ್ಮವನ್ನು ನೀಡಿದಂಥ ಪರಾತ್ಪರ ವಸ್ತುವಿಗೆ ಕೃತಜ್ಞತಾ ಸಮರ್ಪಣೆಗಾಗಿ ಮತ್ತು ಚಿತ್ತಶುದ್ಧಿಗಾಗಿ ಹಾಗೂ ಆತ್ಮಲಿಂಗವಾಗುವುದಕ್ಕಾಗಿ.

## ಸಿದ್ಧಗಂಗಾ ಮಾಸ ಪತ್ರಿಕೆ

*ಸಂಪಾದಕ ಮಂಡಳಿ*

**ಚನ್ನಪ್ಪ ಎರೇಸೀಮೆ**
ಪ್ರಧಾನ ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**
ಸಂಪಾದಕರು

**ಎಂ. ರೇಣುಕಾರಾಧ್ಯ**
ಸಹ ಸಂಪಾದಕರು

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು

**ಸಲಹಾ ಸಮಿತಿ**

ಡಾ|| ಎಂ. ಎನ್. ಚನ್ನಬಸಪ್ಪ
ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ.ಆರ್. ಮಹಾದೇವಯ್ಯ
ಬಿ. ವೀರಭದ್ರಯ್ಯ
ಎಚ್. ಎಸ್. ಸಿದ್ಧಗಂಗಪ್ಪ
ಪಿ. ಎನ್. ಚಂದ್ರಶೇಖರಯ್ಯ

* * *

**ಮುದ್ರಕರು**
**ಗೀತಾಂಜಲಿ ಪ್ರಿಂಟರ್ಸ್**
ಬೆಂಗಳೂರು

* * *

**ಶ್ರೀ ಸಿದ್ಧಗಂಗಾಕ್ಷೇತ್ರ**
ಪ್ರಕಟಣೆ ಸ್ಥಳ

## ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ, ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 33ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

ವಿಳಾಸ :
"ಸಂಪಾದಕರು"
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ-572104.

ವಾರ್ಷಿಕ ಚಂದಾ **35-00** ರೂ.
ಆಜೀವ ಸದಸ್ಯತ್ವ **500-00** ರೂ.



# ಶ್ರೀ ಸಿದ್ಧಲಿಂಗೇಶ್ವರ ವಚನ



ಕಟ್ಟರಸಿಲ್ಲದ ರಾಜ್ಯದಂತೆ
ಜೀವವಿಲ್ಲದ ಕಾಯದಂತೆ
ದೇವನಿಲ್ಲದ ದೇಗುಲದಂತೆ
ಪತಿಯಿಲ್ಲದ ಸತಿಯ ಶೃಂಗಾರದಂತೆ
ಗುರುವಾಜ್ಞೆಯಿಲ್ಲದೆ ತನ್ನ ಮನಕ್ಕೆ ತೋರಿದಹಾಂಗೆ ಮಾಡಿದ ಭಕ್ತಿ
ಶಿವನ ಮುಟ್ಟದು ನೋಡಾ!
ಶ್ರೀಗುರುವಿನ ವಾಕ್ಯದಿಂದಹುದೆಂದುದನು
ಅಲ್ಲ ಎಂದು ಉದಾಸೀನದಿಂದ ಮಾಡಿದ ಭಕ್ತಿ
ಅದು ಕರ್ಮಕ್ಕೆ ಗುರಿ ನೋಡಾ
ಶ್ರೀ ಗುರುವಾಜ್ಞೆವಿಡಿದು ಆಚರಿಸುವ ಸತ್ಯ ಸಾತ್ವಿಕ ಭಕ್ತಿ
ಸದ್ಯೋನ್ಮುಕ್ತಿಗೆ ಕಾರಣ ನೋಡಾ!
ಏಕೋಭಾವದ ನಿಷ್ಠೆ
ಭವದ ವ್ಯಾಕುಲವನೆಬ್ಬಟ್ಟುವುದು ನೋಡಾ
ಅಹುದೋ ಅಲ್ಲವೋ ಎಂಬ ಮನದ ಸಂದೇಹದ ಶೀಲ ಕಳೆದು
ಶಿವಲಿಂಗದೊಳಗೊಂದು ಮಾಡಿ ಬಂದ ಮೋಕ್ಷ
ಕರ್ಮಗಳ ಒತ್ತಿ ಒರಸುವುದು ನೋಡಾ
ಇಂದುಧರನೊಳಗೆ ಬೆಳೆಸಿದ ಅಚಲಿತ ಮಾಹೇಶ್ವರಂಗೆ
ನಮೋ ನಮೋ ಎಂಬೆನು ಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ!

ಸದ್ಗುರುವಿನ ಆಜ್ಞಾನುಸಾರವಾಗಿ ಮಾಡುವ ಭಕ್ತಿಯೇ ಶ್ರೇಷ್ಠ ಫಲದಾಯಕವಾಗುವುದು. ಹೀಗೆ ಮಾಡುವುದನ್ನು ಬಿಟ್ಟು ತನ್ನ ಮನಸ್ಸಿಗೆ ತಿಳಿದಂತೆ ಭಕ್ತಿ ಮಾಡಹತ್ತಿದರೆ ಅರಸನಿಲ್ಲದ ರಾಜ್ಯ, ದೇವರಿಲ್ಲದ ದೇವಾಲಯ, ಪತಿಯಿಲ್ಲದ ಸತಿಯಂತೆ ಅಮಂಗಲವಾಗುವುದು. ಗುರುವಿನಾಜ್ಞೆಯನ್ನು ಪಡೆದು ಭಕ್ತಿಮಾಡುವಲ್ಲಿಯೇ ಮುಕ್ತಿ ದೊರೆಯುವುದು.

(ಕೃಪೆ :- ಷಟ್‌ಸ್ಥಲ ಜ್ಞಾನಸಾರಾಮೃತ. ಶ್ರೀ. ತೋಂ.ಸಿ.ಕೈಸೇ.ಸಂಘ, ಎಡೆಯೂರು-ಗದಗ)

# ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ -572104.

## ಸರ್ವಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ

ಪ್ರಿಯ ಮಿತ್ರರೇ,

ಕಳೆದ ಮಾರ್ಚಿ ಮಾಹೆಯಲ್ಲಿ ನಡೆದ ಪೂಜ್ಯ ಶ್ರೀ ಶ್ರೀಗಳವರ ವಜ್ರಮಹೋತ್ಸವ ಸಮಾರಂಭದಲ್ಲಿ ತಾವೆಲ್ಲರೂ ಅತ್ಯಂತ ಶ್ರದ್ಧಾ-ಭಕ್ತಿಯಿಂದ ಶ್ರಮಿಸಿ ಅಳಿಲು ಸೇವೆಯನ್ನು ಸಲ್ಲಿಸುವುದರ ಮೂಲಕ ಸಮಾರಂಭದ ಯಶಸ್ಸಿಗೆ ಕಾರಣರಾದ ನಿಮಗೆ ಸಂಘದ ಪರವಾಗಿ ತುಂಬು ಹೃದಯದ ಧನ್ಯವಾದಗಳು. ನಮ್ಮ ಸಂಘವು ಇನ್ನೂ ಕೆಲವು ಗುರುತರ ಕಾರ್ಯಗಳನ್ನು ಹಮ್ಮಿಕ್ಕೊಂಡು ಆ ಬಗ್ಗೆ ಚರ್ಚಿಸಿ ತೀರ್ಮಾನ ತೆಗೆದು ಕೊಳ್ಳಬೇಕಾಗಿರುವುದರಿಂದ ಸಂಘದ 43ನೇ ಸರ್ವಸದಸ್ಯರ ಮಹಾಧಿವೇಶನವನ್ನು ದಿನಾಂಕ 18-1-1998ನೇ ಭಾನುವಾರ ಬೆಳಿಗ್ಗೆ 10-30 ಘಂಟೆಗೆ ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿರುವ ವಜ್ರಮಹೋತ್ಸವದ ಪ್ರಸಾದ ನಿಲಯದಲ್ಲಿ ಸಮಾವೇಶಗೊಳ್ಳುವಂತೆ ಶ್ರೀ ಶ್ರೀಗಳವರ ಅಪ್ಪಣೆ ಮೇರೆಗೆ ವ್ಯವಸ್ಥೆ ಮಾಡಲಾಗಿದೆ.

ಮಹಾಸಭೆಗೆ ತಾವು ಗೆಳೆಯರೊಡನೆ ತಪ್ಪದೇ ಆಗಮಿಸಿ ತಮ್ಮ ಅಮೂಲ್ಯ ಸಲಹೆ ಸಹಕಾರಗಳನ್ನು ನೀಡಿ ಅಧಿವೇಶನವನ್ನು ಯಶಸ್ವಿಗೊಳಿಸಬೇಕೆಂದು ಕೋರುತ್ತೇನೆ. ಅನೇಕ ಮಿತ್ರರ ವಿಳಾಸಗಳು ಬದಲಾವಣೆಯಾಗಿರುವ ಕಾರಣ ಪತ್ರಗಳು ತಲುಪದಿರಬಹುದು. ಪ್ರಯುಕ್ತ ಈ ವಿಷಯವನ್ನು ತಮ್ಮ ಮಿತ್ರರಿಗೆ ತಿಳಿಸಿ ಜೊತೆಯಲ್ಲಿ ಅವರನ್ನು ಕರೆತರಲು ವಿನಂತಿ. ಅಂತೆಯೇ ತಾವು ಸಭೆಗೆ ಬರುವಾಗ ತಮ್ಮ ಜೊತೆಯಲ್ಲಿ ಕೆಲಸ ಮಾಡುತ್ತಿರುವ ಹಳೆಯ ವಿದ್ಯಾರ್ಥಿ ಮಿತ್ರರ ವಿಳಾಸಗಳನ್ನು ತರಬೇಕೆಂದು ವಿನಂತಿಸಿಕೊಳ್ಳುತ್ತೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ.

ತಮ್ಮ ವಿಶ್ವಾಸಿ,

**ಎಂ. ಎನ್. ಚನ್ನಬಸಪ್ಪ**

ಪ್ರಧಾನ ಕಾರ್ಯದರ್ಶಿ.



# ಸಂಪಾದಕೀಯ

***ಪವಾಡ ನಡೆಯಿತು - 8***

1997ರ ಮಾರ್ಚ್ 22, 23 ಮತ್ತು 24 ರಂದು ಶ್ರೀಮಠದಲ್ಲಿ ನಡೆದ ಪರಮ ಪೂಜ್ಯ ಡಾ। ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ವಜ್ರಮಹೋತ್ಸವ ಅವಿಸ್ಮರಣೀಯವಾಯಿತು. ಜನಮಾನಸದಲ್ಲಿ ಎಂದೆಂದೂ ಮರೆಯಲಾಗದ ಸಮಾರಂಭವೆನಿಸಿತು. ನಾಡಿಗೆ ನಾಡೇ ಹಾಡಿ ಹರಸಿತು.

ದಿನಾಂಕ 24.3.1997ರಂದು ಸಮಾರೋಪ ಸಮಾರಂಭ. ಮೂರು ದಿನಗಳು ಮುಗಿದು ಹೋದವೇ ಎಂಬ ಭಾವನೆ. ಜನಸಾಗರಕ್ಕೆ ತಂಪೆರಚಿದಂತೆ ಮಳೆರಾಯನ ಆಗಮನ. ಅದೂ ಔಚಿತ್ಯದ ಗೆರೆ ದಾಟದಂತಹ ಸಹಕಾರ. ವೇದಿಕೆಯ ಮೇಲೆ ಗಣ್ಯರ ಹಾಗೂ ಪರಮಪೂಜ್ಯರ ಉಪಸ್ಥಿತಿ. ಪ್ರೇಕ್ಷಕರ ಕಣ್ಣೆಲ್ಲ ಅತ್ತಲೇ.

"ಇದೊಂದು ಅತ್ಯಂತ ಸ್ಮರಣೀಯ ಹಾಗೂ ಹೃದಯಸ್ಪರ್ಶಿ ಸಮಾರಂಭ. ಪ್ರಾಯಶಃ ಭಕ್ತಜನಗಳಿಗೆ ಪರಮಪೂಜ್ಯರ ಈ ಪ್ರತ್ಯಕ್ಷದರ್ಶನವೇ ಸಾಕ್ಷಾತ್ ಕೈಲಾಸ ಎನ್ನುವಂಥ ಭಾವನೆ. ಎಲ್ಲ ವಿದ್ಯಾರ್ಥಿಗಳಿಗೆ ಇದೊಂದು ಗುರುಕುಲ. ಉಳಿದವರೆಲ್ಲರಿಗೂ ಇದೊಂದು ತಪೋವನ. ಪವಾಡ ಸದೃಶವಾದಂಥ ರೀತಿಯಲ್ಲಿ ಕಳೆದ 66 ವರ್ಷಗಳಿಂದ ನಿರಂತರವಾಗಿ ಇಂತಹ ಇಳಿ ವಯಸ್ಸಿನಲ್ಲಿಯೂ ಕೂಡ ಅದ್ಭುತವಾದಂಥ ಕಾರ್ಯಕ್ರಮಗಳ ಮೂಲಕ ಜನಮನವನ್ನು ಗೆದ್ದಿರುವ ಪೂಜ್ಯರು ಅಕ್ಷರ ಸಂಸ್ಕಾರದ ಮಣಿಹವನ್ನು ನಡೆಸಿರುವುದು ನಾಡಿನ ಪುಣ್ಯ" ಎಂಬುದಾಗಿ ಸಮಾರೋಪ ಭಾಷಣ ಮಾಡಿದ ಸಚಿವರಾದ ಮಾನ್ಯ ಶ್ರೀ ಎಂ.ಪಿ. ಪ್ರಕಾಶ್ ಅವರು ಭಕ್ತಿನುಡಿಗಳನ್ನಾಡಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಸಚಿವರಾದ ಮಾನ್ಯ ಶ್ರೀ ರಮೇಶ್ ಸಿ. ಜಿಗಜಿಣಗಿಯವರು "ಈ ಒಂದು ಶ್ರೀಗಳ ಮಠದಲ್ಲಿ ಎಲ್ಲ ವರ್ಗದ ಬಡಮಕ್ಕಳಿಗೆ ಅತ್ಯಂತ ಪವಿತ್ರವಾಗಿರತಕ್ಕಂಥ ವಿದ್ಯೆ ಮತ್ತು ಅನ್ನದಾನವನ್ನು ಮಾಡಿ, ಮಕ್ಕಳಲ್ಲಿ ದೇವರನ್ನು ಕಂಡಿದ್ದಾರೆ. ಈ ಕೆಲಸವನ್ನು ಎಲ್ಲ ಮಠಾಧೀಶರೂ ಮಾಡಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ" ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

"ನಾವೆಲ್ಲರೂ ಅಭಿಮಾನ ಪಡುವಂಥ ಸಂಸ್ಥೆ ಇದು. ಪೂಜ್ಯ ಗುರುಗಳು 66 ವರ್ಷಗಳಿಂದ ಈ ನಾಡಿನ, ಈ ದೇಶದ ಸೇವೆ ಮಾಡಿದ್ದಾರೆ. ಬಡತನ, ನಿರುದ್ಯೋಗ ಮತ್ತು ನಿರಕ್ಷರತೆ ಈ ಮೂರು ರೋಗಗಳು ನಮ್ಮ ಸಮಾಜದಿಂದ ದೂರವಾಗಬೇಕಾದರೆ ಇಂತಹ ಗುರುಗಳ ಅವಶ್ಯಕತೆ ಇದೆ ಎಂದು ನಾನು ಭಾವಿಸುತ್ತೇನೆ" ಎಂಬುದಾಗಿ ಸಚಿವರಾದ ಮಾನ್ಯ ಶ್ರೀ ಆರ್.ವಿ. ದೇಶಪಾಂಡೆ ನುಡಿದರು.

ಸಚಿವರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಮಾತನಾಡುತ್ತ "ಈ ಕ್ಷೇತ್ರದ ಒಂದು ಮಹತ್ವ - ಮನುಷ್ಯ ಯಾವ ರೀತಿ ಬದುಕಬೇಕು, ಬಾಳಬೇಕು ಎಂಬುದನ್ನು ಮಹಾಸ್ವಾಮಿಗಳು ತಮ್ಮ ತಪಸ್ಸಿನ ಮೂಲಕ ತೋರಿಸಿಕೊಟ್ಟಿದ್ದಾರೆ" ಎಂದು ಭಕ್ತಿ ಸಮರ್ಪಣೆ ಮಾಡಿದರು.

"ಏನು ಜನ, ಅದು ಹೇಗೆ ಈ ಜನಕ್ಕೆಲ್ಲ ಇಲ್ಲಿ ಊಟದ ವ್ಯವಸ್ಥೆ. ಅದು ಹೇಗೆ ಊಟ ಮಾಡಿದರು; ಅದೆಲ್ಲಿ ಮಲಗಿಕೊಂಡರು ನಿಜವಾಗಲೂ ಆಶ್ಚರ್ಯ. ಕಾಯಕವೇ ಕೈಲಾಸವೆಂಬ ತತ್ವ ದೈವಸ್ವರೂಪಿಯಾದಂಥ ಪೂಜ್ಯರು ತಮ್ಮ ಕೃಪಾಶೀರ್ವಾದದಿಂದ ನಾಡಿನ ಎಲ್ಲ ಜನತೆಯ ಆಕರ್ಷಣೆ ಮಾಡಿ ಶ್ರೀಕ್ಷೇತ್ರದಲ್ಲಿ ದೇಶದಲ್ಲೇ; ನಾಡಿನಲ್ಲೇ ಹಿಂದೆಂದೂ ನಡೆಯದಿದ್ದ ಒಂದು ಅದ್ಭುತವಾದ ಸತ್ಯದ ಕನಸನ್ನು ನಿಜಮಾಡಿ ತೋರಿಸಿದ್ದಾರೆ. ಪ್ರಕೃತಿ ಮಾತೆಯೂ ಪೂಜ್ಯರ ಸೇವೆಗಳನ್ನು ಗಮನಿಸಿ ಹರ್ಷಭರಿತಳಾಗಿ ವರ್ಷಧಾರೆಯನ್ನು ಪಸಿರಿ ಸಂತೋಷಿಸಿದ್ದಾಳೆ. ನಾಡು ಧನ್ಯ ಎಂದು ಸಚಿವ ಶ್ರೀ ಬಿ. ಸತ್ಯನಾರಾಯಣ ಅವರು ಸಂತೋಷವನ್ನು ವ್ಯಕ್ತಪಡಿಸಿದರು.

ಸಚಿವ ಶ್ರೀ ವಿ. ಸೋಮಣ್ಣ ಅವರು ಮಾತನಾಡುತ್ತ "ಇಂತಹ ಒಬ್ಬ ತಪಸ್ವಿಯನ್ನು ಪಡೆದಿರತಕ್ಕಂಥ ಕರ್ನಾಟಕದ ಐದು ಕೋಟಿ ಜನ ಭಾಗ್ಯವಂತರು. ಇಂತಹ ಭಾಗ್ಯ ಬೇರಾವ ರಾಜ್ಯಕ್ಕೂ ಇಲ್ಲ" ಎಂದು ಮುಕ್ತಕಂಠದಿಂದ ನುಡಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕೇಂದ್ರ ಸರ್ಕಾರದ ಸಚಿವರಾದ ಶ್ರೀ ಆರ್.ಎಲ್. ಜಾಲಪ್ಪನವರು "ಈ ಮಠ ಹಿಮಾಲಯ ಪರ್ವತ. ಹಿಮಾಲಯ ಪರ್ವತದ ಮೇಲೆ ಹೇಗೆ ಶಿವ ಕುಳಿತಿದ್ದಾನೆ. ಆ ರೀತಿ ಸ್ವಾಮಿಗಳು ಮಠದ ಆಧಿಪತ್ಯ ವಹಿಸಿ ಭಕ್ತರೆಲ್ಲರಿಗೂ ಆಶೀರ್ವಾದ ಮಾಡುತ್ತ ಬಂದಿದ್ದಾರೆ. ವಿದ್ಯಾರಣ್ಯರು ಹೊನ್ನಿನ ಮಳೆ ಸುರಿಸಿದರು ಎಂದು ನಾವು ಕೇಳಿದ್ದೇವೆ. ಆದರೆ ಅದು ಒಂದು ದಿವಸ ಇರಬಹುದು. ಆದರೆ ಅರವತ್ತು ವರ್ಷಗಳ ಕಾಲ ಸತತವಾಗಿ ಮನುಷ್ಯನನ್ನು ಪರಿವರ್ತನೆ ಮಾಡಿ ಸಮಾಜದಲ್ಲಿ ತಲೆ ಎತ್ತಿ ಬಾಳುವಂಥ ಒಂದು ಶಕ್ತಿಯನ್ನು ಪೂಜ್ಯರು ಜನತೆಗೆ ನೀಡಿದ್ದಾರೆ. ಜಾತಿ, ಮತಗಳನ್ನು ಗಮನಿಸದೆ ಸಮಾಜ ಸೇವೆಯನ್ನು ಮಾಡಿದ್ದಾರೆ" ಎಂಬುದಾಗಿ ತುಂಬು ಹೃದಯದಿಂದ ಪ್ರಶಂಸಿದರು.

ಸಮಾರಂಭದಲ್ಲಿ ಪೂಜ್ಯ ಶ್ರೀಗಳು ಆಶೀರ್ವಚನ ನೀಡುತ್ತ" ಭಾರತೀಯರು ಜಗತ್ತಿಗೇ ಆದರ್ಶಪ್ರಾಯರಾಗಿ ಬಾಳಿದರು. ಆ ಪ್ರಾಚೀನ ಪರಂಪರೆ ಸತ್ವಯುತವಾದುದು. ಪರಿಪೂರ್ಣ ಜೀವನದೃಷ್ಟಿ ಸಾರಿದ ರಾಷ್ಟ್ರ ನಮ್ಮದು. ಮನುಷ್ಯ ಮನುಷ್ಯನಾಗಿ ಜೀವನ ಕಲೆಯನ್ನು ಅರಿತು ಬಾಳಬೇಕು" ಎಂದು ನುಡಿದರು.

ಈ ಸಂದರ್ಭದಲ್ಲಿ ಮಾಜಿ ಸಚಿವರಾದ ಮಾನ್ಯ ಶ್ರೀ ಲಕ್ಷ್ಮೀನರಸಿಂಹಯ್ಯ, ಸಂಸದರಾದ ಶ್ರೀ ಸಿ.ಎನ್. ಭಾಸ್ಕರಪ್ಪ, ನಗರಸಭಾಧ್ಯಕ್ಷರಾದ ಶ್ರೀ ಟಿ.ಹೆಚ್. ಜಯರಾಂ ಮಾತನಾಡಿದರು.

ವಜ್ರಮಹೋತ್ಸವ ಸಮಿತಿಯ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿದ ಅಧ್ಯಕ್ಷರಾದ ಪದ್ಮಭೂಷಣ ಡಾ. ಎಂ.ಸಿ. ಮೋದಿ, ಕಾರ್ಯಾಧ್ಯಕ್ಷರಾದ ಶ್ರೀ ಬಿ.ಎಸ್. ಮುದ್ದಪ್ಪ, ಕಾರ್ಯದರ್ಶಿಗಳಾದ ಶ್ರೀ ಎಸ್.ಎಸ್. ಹಸಬಿ, ತಾಂತ್ರಿಕ ಸಲಹೆಗಾರರಾದ ಶ್ರೀ ಎಂ.ಎನ್. ನಾಗರಾಜಯ್ಯ, ಶ್ರೀಮಠದ ಹಳೆಯ ವಿದ್ಯಾರ್ಥಿಗಳಾದ ಶ್ರೀ ಎಲ್. ರೇವಣಸಿದ್ಧಯ್ಯ, ಪದ್ಮಶ್ರೀ ಆರ್.ಎಂ.ಬಿ. ಆರಾಧ್ಯ ಅವರುಗಳನ್ನು ಸನ್ಮಾನಿಸಲಾಯಿತು.

●



# ಅನುಭವ ಮಂಟಪ ಮತ್ತು ಶೂನ್ಯ ಸಂಪಾದನೆ

-- ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಮಾಜಿ ಅಧ್ಯಕ್ಷರು,
ಕನ್ನಡ ಸಾಹಿತ್ಯಪರಿಷತ್ತು

ಎಲ್ಲ ಶೂನ್ಯ ಸಂಪಾದನೆಗಳಿಗೂ ಮೂಲದ್ರವ್ಯವೆಂಬಂತಿರುವ ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯ ಸಂಪಾದನೆಯ ಈ ಮಾತುಗಳ ಅತ್ಯಂತ ಗಮನಾರ್ಹವಾದುವು:

.....ಶ್ರೀ ಮತ್ಸಕಲ ಜಗದಾಚಾರ್ಯರುಮಪ್ಪ ಅಲ್ಲಮಪ್ರಭು ದೇವರು; ಬಸವರಾಜ ದೇವರು-ಚೆನ್ನಬಸವರಾಜ ದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳೊಡನೆ ಮಹಾನುಭಾವ ಪ್ರಸಂಗಮಂ ಮಾಡಿದ ಸರ್ವಕರಣ ಶೂನ್ಯ ಸಂಪಾದನೆಯ ಸದ್ಗೋಷ್ಠಿ ಕಥಾ ಪ್ರಸಂಗಮಂ, ಮುಕ್ತಿಕಮಾಗಿರ್ದ ಶಿವಾದ್ವೈತ ವಚನಗಳು, ಉತ್ತರ-ಪ್ರತ್ಯುತ್ತರ ಸಂಬಂಧವಾಗಿ ಸೇರಿಸಿ ಶಿವಗಣ ಪ್ರಸಾದಿ ಮಹಾದೇವಗಳು ಮರ್ತ್ಯಲೋಕದ ಮಹಾಗಣಂಗಳಿಗೆ ಆ ಮಹಾಪ್ರಸಂಗಮಂ ಸಮರ್ಪಿಸಿದ ಭೇದವೆಂತಿರ್ದುದೆಂದಡೆ ಪ್ರಥಮದಲ್ಲಿ.....'

ಮೇಲಿನ ಪ್ರಸಂಗದಲ್ಲಿ ಮುಖ್ಯವಾಗಿರುವುವು- ಎರಡು ಸಂಗತಿಗಳು. ಒಂದು, ಅಲ್ಲಮ ಪ್ರಭುದೇವರು, ಬಸವಣ್ಣನವರು, ಚೆನ್ನಬಸವಣ್ಣನವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳೊಡನೆ ಮಾಡಿದ ಮಹಾನುಭಾವ ಪ್ರಸಂಗ ಮತ್ತು ಅದು ರೂಪಿಸಿದ ಸರ್ವ ಕರಣ ಶೂನ್ಯ ಸಂಪಾದನೆಯ ಸದ್ಗೋಷ್ಠಿ ಕಥಾ ಪ್ರಸಂಗ. ಮತ್ತೊಂದು, ಮುಕ್ತಕಗಳಾಗಿದ್ದ ವಚನಗಳನ್ನು ಉತ್ತರ ಪ್ರತ್ಯುತ್ತರ ಸಂಬಂಧವಾಗಿ ಸೇರಿಸಿ ಶಿವಗಣ ಪ್ರಸಾದಿಗಳು ಮರ್ತ್ಯಲೋಕದ ಮಹಾಗಣಂಗಳಿಗೆ ಮಾಡಿ ಸಮರ್ಪಿಸಿದ ಮಹಾ ಪ್ರಸಂಗ.

ಇಲ್ಲಿ ಪ್ರಮುಖವಾಗುವುದು, ಅಲ್ಲಮ, ಬಸವ, ಚೆನ್ನಬಸವಾದಿಗಳು ಪ್ರಮುಖರಾಗಿ ಮಿಕ್ಕ ಮಹಾಗಣಗಳೊಡನೆ ಮಾಡಿದ ಮಹಾನುಭಾವ ಪ್ರಸಂಗ. ಆಶ್ಚರ್ಯವೆಂದರೆ ಇದಕ್ಕೆ ಸಂಬಂಧಿಸಿದ ಪ್ರಸಂಗಗಳನ್ನು, ಮುಕ್ತಕಗಳಾದ ವಚನಗಳನ್ನು ಉತ್ತರ ಪ್ರತ್ಯುತ್ತರ ಸಂಬಂಧವಾಗಿ ಸೇರಿಸಿದ ಪ್ರಸಂಗಕ್ಕೆ ಶಿವಗಣ ಪ್ರಸಾದಿಗಳೇ ಕಾರಣರೆಂಬಂತೆ ಅರ್ಥವಾಗುವುದು. ಈ ವಿಚಾರವನ್ನು ಇನ್ನೂ ವಿಶದಪಡಿಸಿದರೆ ಹನ್ನೆರಡನೆ ಶತಮಾನದಲ್ಲಿ ನಡೆದಿದೆ ಎನ್ನಲಾದ ಶಿವಾನುಭಾವ ಕಥಾ ಪ್ರಸಂಗಗಳನ್ನು ತಮ್ಮ ಮುಂದಿದ್ದ ವಚನಗಳಿಂದ ಉತ್ತರ ಪ್ರತ್ಯುತ್ತರ ಸಂಬಂಧವಾಗಿ ಸೇರಿಸಿದ ಪ್ರಥಮ ಶಿಲ್ಪಿ ಶಿವಗಣಪ್ರಸಾದಿ ಎಂದೇ ಅರ್ಥವಾಗುತ್ತದೆ. ಈ ಅಂಶ ಶೂನ್ಯ ಸಂಪಾದನೆಗಳ ಶಿಲ್ಪದ ದೃಷ್ಟಿಯಿಂದ ಹೇಗೆ ಪ್ರಮುಖವಾಗುತ್ತದೆಯೋ ಹಾಗೆಯೇ ಇನ್ನೂ ಹಲವಾರು ಪ್ರಶ್ನೆಗಳಿಗೆ ಅವಕಾಶವಾಗುತ್ತದೆ. ಅಷ್ಟೇ ಅಲ್ಲ, ಈಗಿರುವ ಶೂನ್ಯ ಸಂಪಾದನೆಯ ಶಿಲ್ಪಕ್ಕೆ ಶಿವಗಣ ಪ್ರಸಾದಿ ಎಷ್ಟೋ ಕಾರಣವಾಗಿದ್ದಾನೆ ಎಂದರೂ

ವಚನಗಳ ಸಂಭಾಷಣೆಯೆಂಬುದು ನಡೆದೇ ಇರಲಿಲ್ಲವೆ ಎಂಬ ಪ್ರಶ್ನೆಗೂ ಇದು ಕಾರಣವಾಗುತ್ತದೆ.

ಹನ್ನೆರಡನೆ ಶತಮಾನದಲ್ಲಿ ಶರಣರು ಮಾಡಿದ ಶಿವಾನುಭಾವ ಪ್ರಸಂಗಗಳನ್ನು ಕಂಡರಿಸಿಕೊಳ್ಳುವ ಯತ್ನದಲ್ಲಿ ಶೂನ್ಯ ಸಂಪಾದನೆಗಳು ತೊಡಗಿದಂತೆಯೂ ಅವುಗಳಿಗೆ ಮೂಲದ್ರವ್ಯವಾಗಿ ವಚನಗಳನ್ನು ಉತ್ತರ ಪ್ರತ್ಯುತ್ತರ ರೂಪವಾಗಿ (ಚಂಪೂ ಶೈಲಿ ಎನ್ನೋಣವೆ ಅಥವಾ ಯಕ್ಷಗಾನ ಪ್ರಸಂಗ ಎನ್ನೋಣವೆ? ಅಥವಾ ನಾಟಕರೂಪ ಎನ್ನೋಣವೆ?) ಬಳಸಿಕೊಂಡಂತೆಯೂ ಅರ್ಥವಾಗುತ್ತದೆ. ಬಹುಶಃ ಈ ಕ್ರಮದಲ್ಲಿಯೇ ಶೂನ್ಯ ಸಂಪಾದನೆಯ ಶಿಲ್ಪವನ್ನು ಗ್ರಹಿಸಿಬಿಟ್ಟರೆ ಶೂನ್ಯ ಸಂಪಾದನೆಗಳಿಗೆ ಕಾರಣರಾದ ಬಸವಣ್ಣ ಅಲ್ಲಮಪ್ರಭು, ಚೆನ್ನ ಬಸವಣ್ಣ ಮೊದಲಾದ ಪ್ರಮುಖರು ನಡೆಸಿದ ಸದ್ಗೋಷ್ಠಿಗಳ ಕ್ಷೇತ್ರ ಅನುಭವ ಮಂಟಪ ಆಗಬೇಕಾಗುತ್ತದೆ.

ಅನುಭವ ಮಂಟಪ ಹಾಗೂ ಶೂನ್ಯ ಸಂಪಾದನೆಗಳು ಪರಸ್ಪರಾವಲಂಬಿಗಳಾಗಿದ್ದರೂ ಮೂಲಭೂತವಾಗಿ ಅನುಭವ ಮಂಟಪವೇ ಮೂಲವಾಗಿದ್ದು ಅಲ್ಲಿ ನಡೆದ ಸದ್ಗೋಷ್ಠಿಗಳ ಶಿವಾನುಭಾವ ಮಹಾಪ್ರಸಂಗ ಸಮುದಾಯಗಳ ಮಹಾಸ್ರೋತದ ಒಂದು ಅಂಶ ಮಾತ್ರ ಶೂನ್ಯ ಸಂಪಾದನೆಗಳಲ್ಲಿ ಮೂಡಿದೆ ಎನ್ನಬೇಕಾಗುತ್ತದೆ. ಹನ್ನೆರಡನೆ ಶತಮಾನದಲ್ಲಿ ಶರಣರು ನಡೆಸಿದ್ದು - ನೂತನ ಸಮಾಜ ನಿರ್ಮಾಣ ಕಾರ್ಯವನ್ನು, ಈ ಲೋಕದ ಬದುಕನ್ನು ಪರಲೋಕದ ಬದುಕನ್ನಾಗಿ ಮಾಡುವುದಕ್ಕಿಂತ ಹೆಚ್ಚಾಗಿ ಕೈಲಾಸದ ಬದುಕು ಇಲ್ಲಿ ಸಾಧ್ಯವಾಗಬೇಕು ಎನ್ನುವ ಸಂಕಲ್ಪದಿಂದ ಕೂಡಿದ ಮಹಾ ಸಾಹಸ ಅದು. ಅದನ್ನು ಅರ್ಥ ಮಾಡಿಕೊಂಡರೆ ಶೂನ್ಯ ಸಂಪಾದನೆ - ಇಂದು ಎಷ್ಟೇ ಮಹತ್ವದ ಸಾಂಸ್ಕೃತಿಕ ಸಿದ್ಧಿ ಆಗಿದ್ದರೂ ಶರಣರ ಕಾಲದ ಸಾಧನೆ-ಸಾಧ್ಯತೆಗಳ ಹಿನ್ನೆಲೆಯಲ್ಲಿ ತನಗೆ ತಾನೇ ಒಂದು ಪರಿಮಿತಿಗೊಳಗಾಗಿ ಶೂನ್ಯ ಸಂಪಾದನೆಯ ದಿಕ್ಕಿನ ಕಡೆಗೇ ಚಲನಶೀಲವಾಗುವುದನ್ನು ಗುರುತಿಸಬಹುದು. ಶೂನ್ಯ ಸಂಪಾದನೆಗಳು ಮತ್ತೆ ಮತ್ತೆ ಕಂಡರಿಕೆಗೊಳ್ಳುತ್ತ ಹೋದ ಹಾಗೆ ಕಾಯಕತತ್ವದ ಮಹತ್ವ ಕೂಡಾ ಅದರೊಂದಿಗೆ ಬೆರೆತುಕೊಂಡು ಹೊಸ ಆಯಾಮವೊಂದು ತೆರೆದುಕೊಂಡು ಹನ್ನೆರಡನೆಯ ಶತಮಾನದ ಕಾಣ್ಕೆಗೆ ಸಮೀಪವಾಗುವುದನ್ನು ಮನಗಾಣಬಹುದು.

ಈ ಅರ್ಥದಲ್ಲಿ ಅನುಭವ ಮಂಟಪ ಎಂಬುದು ಶೂನ್ಯ ಸಂಪಾದನೆಗಳ ಸ್ಫೂರ್ತಿಯ ಹಾಗೂ ಮೂಲದ್ರವ್ಯದ ಕ್ಷೇತ್ರ. ಅಲ್ಲಿ ನಡೆದ ಚರ್ಚೆ, ವಿವಾದ, ವಿಶ್ಲೇಷಣೆ ವೈಚಾರಿಕ ಹಾಗೂ ಆಧ್ಯಾತ್ಮಿಕ ಸಂಘರ್ಷಗಳಲ್ಲಿದ್ದುದು ತಗರ ಹೋರಾಟವಲ್ಲ, ಮೌಲ್ಯಗಳ ಅನ್ವೇಷಣೆ. ಇದನ್ನು ಒಪ್ಪಿಕೊಂಡರೆ ಶೂನ್ಯ ಸಂಪಾದನೆಯ ಮೊಳಕೆಯೊಡೆದು ರೂಪುಗೊಳ್ಳುವ ಕ್ರಿಯೆಯತ್ತ ಗಮನ ಹೋಗುತ್ತಿದ್ದಂತೆ ಹನ್ನೆರಡನೆ ಶತಮಾನದ ಶರಣರ ಗೋಷ್ಠಿಗಳಿಗೆ ಹೆಚ್ಚಿನ ಮಹತ್ವ ಉಂಟಾಗಿ ಶೂನ್ಯ ಸಂಪಾದನೆಗಳ ವಿಕಾಸದ ಬಗೆಗೆ ಮರು ಚರ್ಚೆಗೆ ಅವಕಾಶವಾಗುತ್ತದೆ.

ಪ್ರಭು ಸಂಪಾದನೆ, ಕ್ರಿಯಾ ಸಂಪಾದನೆ - ಶಬ್ದಗಳನ್ನು ಮೊದಲಿಗೆ ಬಳಸಿದವನು ಸಿಂಗಿರಾಜನೆಂದೇ ಹೇಳಬೇಕು. ಶೂನ್ಯಸಿಂಹಾಸನ ಶಬ್ದದ ಶಿಲ್ಪಿ ಕೂಡ ಸಿಂಗಿರಾಜ ಎಂಬುದು



ಮಹತ್ವದ ವಿಚಾರ. ಶೂನ್ಯಸಿಂಹಾಸನ ಶಬ್ದಸಮುಚ್ಚಯಕ್ಕೆ ಶೂನ್ಯ ಸಂಪಾದನೆ ಶಬ್ದಗಳನ್ನು ಜೋಡಿಸಿದವನು ಶಿವಗಣ ಪ್ರಸಾದಿ ಮಹಾದೇವಯ್ಯ.

ಬಯಲುಗಳಿಕೆಯನ್ನು ಶೂನ್ಯಸಂಪಾದನೆಯೆಂದು ಸಂಸ್ಕೃತೀಕರಣಗೊಳಿಸಿದ ಈ ಹಂತಕ್ಕೆ ಹಿಂದೆಯೇ ಶರಣರ ಸದ್‌ಗೋಷ್ಠಿಗಳಲ್ಲಿ ನಡೆದ ಮಹಾಪ್ರಸಂಗಗಳು ಅಲ್ಲಿನ ಸದ್‌ಗೋಷ್ಠಿಯಲ್ಲಿ ನಡೆದ ಕಥಾ ಪ್ರಸಂಗಗಳಿಗೆ ಮೂಲದ್ರವ್ಯವಾಗಿರಬಹುದು. ಬಹುಶಃ ಆ ಕಾಲದಲ್ಲಿಯೇ ಅಲ್ಲಮ ಬಸವ ಚನ್ನಬಸವಣ್ಣ ಅಕ್ಕ ಸಿದ್ಧರಾಮಾದಿಗಳು ನಡೆಸಿದ ಸದ್ಗೋಷ್ಠಿಗಳಲ್ಲಿ ಅವರ ವಚನಗಳು ಬಳಕೆಯಾಗಿರಲಿಲ್ಲ ಎನ್ನುವುದು ಹೇಗೆ? ಬಹುಶಃ ವಿಶ್ವದ ಯಾವುದೇ ಸಾಹಿತ್ಯದಲ್ಲಿ ಅಥವಾ ಇತಿಹಾಸದ ಘಟನೆಗಳಲ್ಲಿ ಸಾಧ್ಯವಾಗಿರದಂಥ ಅಪೂರ್ವದ ಘಟನೆಯೊಂದು ಹನ್ನೆರಡನೆ ಶತಮಾನದಲ್ಲಿ ನಡೆದಿದ್ದು ಆ ಕಾಲದ ವಚನಸಾಹಿತ್ಯ ನಿರ್ಮಾಣವು ಒಂದು ಅದ್ಭುತವಾದ ರೀತಿಯ ಸಾಮೂಹಿಕ ಸೃಷ್ಟಿಯೂ ಆಗಿದೆ. * ವಚನಕಾರರು ಒಬ್ಬರಿಂದ ಮತ್ತೊಬ್ಬರು ಸ್ಫೂರ್ತಿಗೊಂಡು ಇಡೀ ವಾತಾವರಣವೇ ವಚನ ನಿರ್ಮಾಣದ ಸೃಜನಶೀಲತೆಯಲ್ಲಿ ತೊಡಗುವ ಆ ಕಾಲದಲ್ಲಿ ನಡೆದ ಆ ಸದ್ಗೋಷ್ಠಿಗಳು ಹೋರಾಟಗಳಲ್ಲ ಎಂಬುದಕ್ಕೆ ಆದ್ಯರಕಾಲದಿದಲೂ ಆಧಾರಗಳಿವೆ. ಮೊದಲನೆಯದಾಗಿ ಜೇಡರ ದಾಸಿಮಯ್ಯನ ಈ ವಚನಗಳನ್ನು ಗಮನಿಸಿ :

ಕಡೆಗೀಲಿಲ್ಲದ ಬಂಡಿ ಹೊಡೆಗೆಡೆಯ ಮಾಣ್ಬುದೆ
ಕಡೆಗೀಲು ಬಂಡಿಗಾಧಾರ
ಇಡಿದರ್ಪಯೇರಿದ್ದ ಒಡಲೆಂಬ ಬಂಡಿಗೆ
ಮೃಡ ಭಕ್ತರ ನುಡಿಗಡಣವೇ
ಕಡೆಗೀಲು ಕಾಣಾ ರಾಮನಾಥಾ. 1.

ಕರಿಯನಿತ್ತಡೆ ಒಲ್ಲೆ ಸಿರಿಯನಿತ್ತಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆಯಿತ್ತಡೆ
ನಿಮ್ಮನಿತ್ತೆ ಕಾಣಾ ರಾಮನಾಥಾ. 2

ಮೊದಲ ವಚನದಲ್ಲಿರುವ ಶರಣರ ನುಡಿ ಮೃಡಭಕ್ತರ ನುಡಿಗಡಣವಾಗಿದ್ದು ಅದೇ ಕಡೆಗೀಲಾಗಿ ಒಡಲೆಂಬ ಬಂಡಿಗೆ ಆಧಾರವಾಗಿರುವ ಸಂಗತಿಯಿದೆ. ಬದುಕನ್ನು ನಿಯಂತ್ರಿಸಿ ರಕ್ಷಿಸುವ ನೆಲೆಯಲ್ಲಿ ಶರಣರ ನುಡಿಗಳಿರುವುದನ್ನು ಇಲ್ಲಿ ಗುರುತಿಸಬಹುದು. ಆ ಕಾಲದ ಶರಣರ ನುಡಿಗಣದ ಮಹತ್ವದ ಒಂದು ಮುಖ ಅಲ್ಲಿ ಪರಿಚಯವಾದರೆ ಮುಂದಿನ ವಚನದಲ್ಲಿ ಆ ಶರಣರ ಮಾತುಗಳು ಎಲ್ಲೋ ಹೇಳಿದ ಮಾತುಗಳಾಗಿರದೆ ಶರಣರು ನಡೆಸಿರಬಹುದಾದ ಸದ್ಗೋಷ್ಠಿಗಳಲ್ಲಿ ಆಡಿದ 'ಸೂಳ್ನುಡಿ'ಗಳು ಶರಣರು ಸರದಿಯ ಮೇಲೆ ಆಡಿದ ಉತ್ತರ ಪ್ರತ್ಯುತ್ತರ ರೂಪದ ಮಾತುಗಳಾಗಿರುವ ಸಾಧ್ಯತೆ ಅತ್ಯಂತ ಮಹತ್ವದ್ದಾಗಿ ತೋರುತ್ತದೆ.

ಶರಣರು ಒಂದೆಡೆ ಕಲಿಯುತ್ತಿದ್ದ; ಕಲೆತು ಅನುಭವ ಹಾಗೂ ಅನುಭಾವದ ವಿನಿಮಯ ಮಾಡುತ್ತಿದ್ದ ಸದ್ಗೋಷ್ಠಿಗಳು ನಡೆಯುತ್ತಿದ್ದುದನ್ನು ಸೂಚಿಸುವ ಎಡೆ ಇದಾಗಿದೆ.

ಇದರ ಇನ್ನೂ ಖಚಿತವಾದ ರೂಪಗಳು ಹರಿಹರನ ಕಾವ್ಯಗಳಲ್ಲಿ ದೊರೆಯುತ್ತವೆ. ಈ ಎರಡು ಉದಾಹರಣೆಗಳನ್ನು ಗಮನಿಸಿ:

"ಸಂಗಯ್ಯ ಬಾಯೆಂದು ಕರೆವೆ ನೀನೆನ್ನುವಂ
ಹಿಂಗಲೀಯದು ಶರಣಗೋಷ್ಠಿ ಕೇಳೆನ್ನನು
ಶರಣರೊಕ್ಕುದರ ಸವಿ ಕೈಲಾಸದೊಳಗುಂಟೆ."
"ಈ ಬಂದುದಿದೆ ಚೊಳದೇಶದ ಮಹಾಗಣಂ
ಆ ಬಂದುದೆನೆ ಪಾಂಡ್ಯ ಕೇರಳ ದಿಶಾಗಣಂ
ಇದು ಗೌಳ ದೇಶದ ಗಣಾವಳಿಯ ಸಂಭ್ರಮಂ
ಅದು ಮಾಳವದ ಮಹಾಗಣ ಕುಲದ ವಿಭ್ರಮಂ
ಇದು ವಂಗ ಬಂಗಾಳ ಲಾಟ ದೇಶದ ಗಣಂ

..........................................................

ಇತ್ತಲಿದೆ ಸಿಂಗಣ ದ್ವೀಪದ ಗಣವ್ರಾತ
ವತ್ತಲದೆ ಕಾಶ್ಮೀರ ದೇಶದ ಶರಣ ಸಂಜಾತ
ವೆಂದೆಂದು ತೋರುತ್ತೆಯಾಡುತ್ತೆ ಬೊಬ್ಬಿಡುತೆ

..........................................................

ಅಗಳಾ ಬಸವನೆಲ್ಲರ್ಗೆ ಗದ್ದುಗೆಯಿತ್ತು

..........................................................

ಎಲ್ಲರ್ಗೆ ಬೇರೆ ಸಿಂಹಾಸನವನೊಲಿದೀವ 3

ಮೊದಲ ರಗಳೆಯ ಭಾಗ ಬಸವಣ್ಣನ ಮನೆಯಲ್ಲಿ ನಡೆಯುತ್ತಿದ್ದ ಶರಣ ಗೋಷ್ಠಿಯನ್ನು, ಅದರ ಬಗೆಗಿದ್ದ ಬಸವಣ್ಣನ ಶ್ರದ್ಧೆ, ಭಕ್ತಿಗಳನ್ನು ವ್ಯಂಜಿಸಿದರೆ ಎರಡನೆಯ ಭಾಗ ಶರಣರ ಗೋಷ್ಠಿಯಲ್ಲಿ ಸೇರುತ್ತಿದ್ದ ದೇಶ ವಿದೇಶಗಳ ಶರಣರ ಚಿತ್ರದ ವಿವರಗಳನ್ನೊಳಗೊಂಡಿದ್ದು ವಾಸ್ತವವಾಗಿ ಭಾರತದ ಬೇರೆ ಬೇರೆ ಭಾಗಗಳಿಂದ ಬಂದ ಜನ ಕೇವಲ ಬಸವಣ್ಣನವರ ಮನೆಯ ದಾಸೋಹಕ್ಕಾಗಿಯೇ ಬರುತ್ತಿದ್ದರೆನ್ನುವುದು ಸತ್ಯಕ್ಕೆ ದೂರವಾಗುತ್ತದೆ. ದೇಶದ ನಾನಾ ಭಾಗಗಳಿಂದ ಬಂದ ಜನರನ್ನು ಬೇರೆ ಬೇರೆ ಸಿಂಹಾಸನಗಳಲ್ಲಿ ಕೂಡಿಸುವ ಚಿತ್ರದ ಜೊತೆಗೆ ಅಲ್ಲಿ ನಡೆದಿರಬಹುದಾದ ಶಿವಾನುಭವ ಪ್ರಸಂಗಗಳು ಕಣ್ಣೆದುರಾಗುತ್ತವೆ. ಅದು ಶರಣರ ಗೋಷ್ಠಿ ಆಗಿತ್ತು ಎನ್ನುವುದರಿಂದ ಅಲ್ಲೂ 'ಸುಳ್ನುಡಿ'ಗಳು ಸೇರಿ ಶಿವಾನುಭಾವ ಪ್ರಸಂಗಗಳು ರೂಪುಗೊಂಡಿರುವ ಚಿತ್ರ ಮಸುಕು ಮಸುಕಾಗಿ ಗೋಚರಿಸುತ್ತದೆ.

ಮೇಲಿನ ಗೋಷ್ಠಿಗಳು ಕೇವಲ ಶರಣರ ಕೂಟಗಳಾಗಿರಲಾರವು ಎಂಬುದಕ್ಕೆ ರಾಘವಾಂಕನ 'ಸಿದ್ಧರಾಮ ಚಾರಿತ್ರ'ದಲ್ಲಿ ಬರುವ ಅಲ್ಲಮ ಸಿದ್ಧರಾಮರ ಸಮಾಗಮ ಸಂದರ್ಭದ 'ಸುಳ್ನುಡಿ'ಗಳು ಮತ್ತಷ್ಟು ಪುಷ್ಟಿಕೊಡುತ್ತವೆ. ಹನ್ನೆರಡನೆ ಶತಮಾನದಲ್ಲಿ ಬಸವಣ್ಣನ



ವ್ಯಕ್ತಿತ್ವ ಅತ್ಯಂತ ಪ್ರಧಾನವಾಗಿಬಿಡುತ್ತದೆ. ಏಕೆಂದರೆ ಆ ವ್ಯಕ್ತಿತ್ವದ ಮಹಿಮೆಯ ಸುತ್ತ ನೂರಾರು ಶರಣರು ಸೇರುವುದು ಮತ್ತು ಚರ್ಚಿಸುವುದು ಮತ್ತೆ ಅದಕ್ಕಿಂತಲೂ ಮುಖ್ಯವಾಗಿ ನೂರಾರು ವಚನಕಾರರು ವಚನ ರಚನೆ ಮಾಡಿ ಬದುಕಿನ ದೃಷ್ಟಿಯಿಂದ ಒಂದು ಆದರ್ಶವನ್ನು ಕಾಣಿಸುವ ಮಹಾಯತ್ನವಾಗಿ ಪರಿವರ್ತಿತವಾದುದನ್ನು ಕಂಡಾಗ, ಬಸವಣ್ಣ ಆ ಕಾಲದ ಆ ಶರಣರಿಗೆಲ್ಲ ಒಂದು ದಿಕ್ಕನ್ನು ತೋರಿಸುವ ವ್ಯಕ್ತಿಯಾಗಿರುವ ಐತಿಹಾಸಿಕ ಮಹತ್ವ ಕಣ್ಣೆದುರಾಗುತ್ತದೆ. ಅಷ್ಟೇ ಅಲ್ಲ, ಎನಗಿಂತ ಕಿರಿಯರಿಲ್ಲ ಎನ್ನುವ ವಿನಯವೇ ಜೀವನದ ಉಸಿರಾಗಿ ಅಷ್ಟೇ ಏಕೆ ಜೀವನದ ಶ್ರುತಿಯಾಗಿರುವ ಬಸವಣ್ಣ ತನ್ನ ಕಾಲದಲ್ಲಿ ತನಗೆದುರಾದ ಅಲ್ಲಮ, ಅಕ್ಕ, ಸಿದ್ಧರಾಮ ಮೊದಲಾದ ಮಹಾ ಶರಣರ ಮಹತ್ವವನ್ನು ಮನಗಾಣುವ ಅಂಶ ಮತ್ತೆ ಅಷ್ಟೇ ಪ್ರಮುಖವಾದುದು. ಬಹುಶಃ ಇಂಥ ಮುಕ್ತವಾದ ಮನಸ್ಸು ಹಾಗೂ ಜೀವನ ದೃಷ್ಟಿ ಬಸವಣ್ಣನಿಗಿದ್ದುದರಿಂದಲೇ ಅಲ್ಲಮನಂಥವರು ಅವನ ಮನೆಯಲ್ಲಿ ಅಧ್ಯಕ್ಷರಂತೆ ಕುಳಿತು ಅನುಭವ ಮಂಟಪ ನಡೆಸಿರುವ ಸಾಧ್ಯತೆ ಹೆಚ್ಚಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದರೆ ಅನುಭವ ಮಂಟಪದ ಮೊದಲ ನೆಲೆ ಅಣ್ಣನ ಮಹಾ ಮನೆಯೇ ಇರಬೇಕು. ಚನ್ನಬಸವಣ್ಣನವರ ವಚನದಲ್ಲಿ ಬರುವ ಕಟ್ಟಡದ ವರ್ಣನೆಯಲ್ಲಿ ಅಣ್ಣನ ಮಹಾಮನೆಯ ಚಿತ್ರದಂತೆ ಮಿಕ್ಕ ಶರಣರ ಮಹಾಮನೆಗಳ ವಿವರಗಳೂ ಇವೆ. ಬಹುಶಃ ಹನ್ನೆರಡನೆ ಶತಮಾನದ 'ಅನುಭವ ಮಂಟಪ' ಪ್ರಧಾನವಾಗಿ ಅಣ್ಣನ ಮನೆಯಾಗಿದ್ದಿರಬೇಕು. ಈ ಕ್ಷೇತ್ರ-ಅನುಭವ ಮಂಟಪದ ಕ್ಷೇತ್ರ ಮನೆಯಿಂದ ಮನೆಗೆ ಮುಕ್ತವಾಗಿದ್ದಿರಬೇಕು. ಈ ದೃಷ್ಟಿಯಿಂದ ನೋಡಿದರೆ ಅನುಭವ ಮಂಟಪದ ರೂಪು ಮೊದಲು ಬಸವಣ್ಣನ ಮನೆಯಲ್ಲಿ ನಡೆದ ಸಭೆಗಳಲ್ಲಿ ಮೊಳಕೆಯೊಡೆದಿರಬೇಕು. ಅನಂತರ ಬೇರೆ ಬೇರೆ ಶರಣರ ಮನೆಗಳಲ್ಲೂ ಈ ಗೋಷ್ಠಿಗಳು - ಒಂದೊಂದು ದಿನ ಒಬ್ಬೊಬ್ಬರ ಮಹಾಮನೆಗಳಲ್ಲಿ ನಡೆದಿರಬೇಕು. ಅಲ್ಲಿ ಬಯಲಗಳಿಕೆಯ ಮಹಾಸಾಧನೆಯ ಕಾರ್ಯ ನಡೆಯಬೇಕು. ಈ ಹಿನ್ನೆಲೆಯಲ್ಲಿ ಅಲ್ಲಮಪ್ರಭು ಶೂನ್ಯ ಸಂಪಾದನೆಯ ನಾಯಕನಾಗಿ ಬೆಳೆದು ಬಂದ ರೀತಿ ಕೂಡ ಅಭ್ಯಾಸ ಯೋಗ್ಯವಾಗಿರುತ್ತದೆ. ಮೊದಲ ಶೂನ್ಯ ಸಂಪಾದನೆಯಲ್ಲಿ ಅಲ್ಲಮನು ಪ್ರಧಾನವಾಗಿರುವುದು ನಿಜವಾದರೂ ಶಿವಶರಣ ಜನ್ಮವನ್ನು ಕುರಿತಂತೆ ಹರಿಹರನ ಪರಂಪರೆಯಂತೆ ಅಲ್ಲಮ ಕೈಲಾಸದಲ್ಲಿದ್ದು ಶಾಪಗ್ರಸ್ತನಾಗಿದ್ದು ಭೂಲೋಕದಲ್ಲವತರಿಸಿದ ಎಂದಿದ್ದ ವಿಷಯ ಮಿಕ್ಕ ಶೂನ್ಯ ಸಂಪಾದನಕಾರರಲ್ಲಿ ಪ್ರತಿಭಟನೆಗೆ ಗುರಿಯಾದದ್ದೂ ಸಹಜವೆ. ಆದರೆ ಗುಮ್ಮಳಾಪುರದ ಸಿದ್ಧಲಿಂಗನ ಶೂನ್ಯಸಂಪಾದನೆ ಮಾತ್ರ ಬಸವಣ್ಣನ ಪಾತ್ರದ ಮಹತ್ವವನ್ನು ಮೊದಲ ಗುರುತಿಸಿದ, ಅಷ್ಟೇ ಅಲ್ಲ, ಅಲ್ಲಮನ ಪಾತ್ರಕ್ಕೆ ಯೋಗ್ಯವಾಗುವಂತೆ ರೂಪಿಸಿದ ವಿಷಯ ಆಶ್ಚರ್ಯಕರವಾದುದು. ಬಸವಣ್ಣ ಹನ್ನೆರಡನೆಯ ಶತಮಾನದ ಚಾಲಕಶಕ್ತಿಯಾಗಿದ್ದರೆ ಕಲ್ಯಾಣದ ಅವನತಿಯ ಅನಂತರ ಬಂದ ಶರಣರಿಗೆಲ್ಲ ಪ್ರಭು ಕೇಂದ್ರ ವ್ಯಕ್ತಿಯಂತೆ ಕಂಡದ್ದು ಸೋಜಿಗ. ದೊಡ್ಡ ಕ್ರಾಂತಿಯ ಮುಂಚೂಣಿಯಲ್ಲಿದ್ದೂ ಇದ್ದಕ್ಕಿದ್ದಂತೆ ಹಿಂದಕ್ಕೆ ಸರಿದು ಹೋದ ಬಸವಣ್ಣನವರ ವ್ಯಕ್ತಿತ್ವದ ಬಗ್ಗೆ ಶರಣರು ಗೊಂದಲಗೊಂಡಿರಲೂ ಸಾಕು. ಬಿಜ್ಜಳನ ಕೊಲೆಗೆ ಕಾರಣನಾದವನು ಎಂದು ಒಂದು ಕಡೆ, ಬಿಜ್ಜಳನಂಥವರ ಕೊಲೆ ಮಾಡಬಾರದು ಎಂದು ಅಡ್ಡಿಪಡಿಸಿದ ನಿಷ್ಠೆಯ ಸಾತ್ವಿಕ ಎಂದು ಮತ್ತೊಂದು ಕಡೆ, ಮತ್ತೆ ಜಾತಿ ಜಾತಿಗಳಲ್ಲಿ

ಸಂಕರವನ್ನುಂಟುಮಾಡಿದವನು ಎಂಬ ಭ್ರಮೆಯಿಂದ ದಿಗಿಲುಗೊಂಡವರ ಭಾವನೆ ಇನ್ನೊಂದು ಕಡೆ. ಹೀಗೆಲ್ಲ ಆಗಿ ಇಂಥ ಯಾವುದೇ ಲೌಕಿಕದ ಗೊಂದಲಗಳಿಗೆ ಸಿಗದ ಅಲ್ಲಮ ಸಹಜವಾಗಿಯೇ ಬಸವನಿಗಿಂತ ಹೆಚ್ಚಿನ ಪ್ರಾಧಾನ್ಯತೆ ಪಡೆದಿರಬಹುದು. ಈ ಸಂದರ್ಭದಲ್ಲಿ ಮಠಮಾನ್ಯಗಳು ಹಾಗೂ ವಿರಕ್ತರ ಭಾವನೆಗಳೂ ಇದಕ್ಕೆ ಸಾಕಷ್ಟು ಪುಷ್ಟಿ ಒದಗಿಸಿರಬೇಕು. ಅಂತೂ ಶೂನ್ಯ ಸಂಪಾದನೆಗಳ ಶ್ವಾಸಕೋಶಗಳಿದ್ದಂತೆ ಅಲ್ಲಮ-ಬಸವರು ಎಂಬ ಡಾ|| ಎಲ್. ಬಸವರಾಜು ಅವರ ಮಾತಂತೂ ಅರ್ಥಪೂರ್ಣವಾದದ್ದು.

ಅದೇನೇ ಇರಲಿ, ಅನುಭವ ಮಂಟಪ ಎಂಬ ಶಬ್ದಗಳ ಕಡೆಗೆ ಹೊರಳಿದಾಗ ವಚನಶಾಸ್ತ್ರದಲ್ಲಿ ಅನುಭಾವ, ಅನುಭಾವಿ, ಅನುಭವಗೋಷ್ಠಿ ಮುಂತಾದ ಅನೇಕ ಶಬ್ದಗಳು ಧಾರಾಳವಾಗಿ ದೊರೆಯುತ್ತವೆ. ಇಂತಹ 'ಅನುಭಾವ ಗೋಷ್ಠಿಗೆ' ರಗಳೆಗಳಲ್ಲಿ 'ಗೀತಗೋಷ್ಠಿ' ಎಂದೂ, ಬಸವ ಪುರಾಣದಲ್ಲಿ 'ತತ್ವಗೋಷ್ಠಿ' ಎಂದೂ, ಚನ್ನಬಸವ ಪುರಾಣದಲ್ಲಿ 'ಶಿವತತ್ವ ಗೋಷ್ಠಿ' ಎಂದೂ, ಏಕಾಂತರಾಮಯ್ಯನನ್ನು ಕುರಿತು ಹೇಳುವ ಅಬ್ಬಲೂರು ಶಾಸನದ 70ನೆಯ ವಳಿಯಲ್ಲಿ 'ಧರ್ಮಗೋಷ್ಠಿ' ಎಂದೂ ಕೆಲವು ಪಾರಿಭಾಷಿಕ ಶಬ್ದಗಳು ಬಳಕೆಯಾಗಿವೆ.4

ಕಾಲಜ್ಞಾನದ ವಚನಗಳಲ್ಲಿ ವಿಚಾರ ಮಂಟಪ, ವಿಶಾಲ ಮಂಟಪ, ಆಚಾರ ಸಂಪನ್ನರ ಅನುಭವ ಮಂಟಪ, ಪ್ರಕಾಶ ಮಂಟಪ, ಜ್ಞಾನ ಪ್ರಕಾಶ ಮಂಟಪ, ಪ್ರಸಾದ ಮಂಟಪ, ಎಲ್ಲ ದೇವರ ಅನುಭವ ಮಂಟಪ ಇಂಥ ಉಲ್ಲೇಖಗಳಿದ್ದರೂ ಕಾಲಜ್ಞಾನ ವಚನಗಳಲ್ಲಿ ಎರಡು ಕಡೆ ಅನುಭವ ಮಂಟಪ ಎಂಬ ಪದಸಮುಚ್ಚಯ ದೊರಕಿದರೂ ಈ ವಚನಗಳನ್ನು ಅಧಿಕೃತ ಎಂದು ಆಧಾರವಾಗಿ ತೆಗೆದುಕೊಳ್ಳುವುದು ಕಷ್ಟ.

ಬಹುಶಃ ಅನುಭವ ಮಂಟಪ ಎಂಬ ಹೆಸರು ಶೂನ್ಯ ಸಂಪಾದನೆಗಳು ಮೂಡಿದ ಮೇಲೆ ಹುಟ್ಟಿಕೊಂಡದ್ದಿರಬೇಕು. ವಾಸ್ತವವಾಗಿ ಇದ್ದದ್ದೆಲ್ಲಿ ಎಂದು ಯೋಚಿಸಿದರೆ ಇಂಥ ಜಾಗದಲ್ಲಿ ಅನುಭವ ಮಂಟಪವಿತ್ತು ಎಂದು ಸಾಧಿಸಲು ಆಧಾರಗಳು ಇಲ್ಲ. ಅಷ್ಟೇ ಅಲ್ಲ, ಯಾವುದೇ ಒಂದು ಮಹಾ ಕಟ್ಟಡಕ್ಕೆ ಈ ಸ್ಥಾನ ಇತ್ತು ಎಂದು ಹೇಳಲು ಸಾಧ್ಯವಿಲ್ಲ. ಆದರೆ, ಜೇಡರ ದಾಸಿಮಯ್ಯನ ವಚನಗಳಲ್ಲಿ ಬರುವ ಶರಣರ ಸೂಳ್ನುಡಿಯಂಥ ಪದಗಳಿಂದ ಇಂಥ ಅನುಭಾವದ ಚರ್ಚೆ ನಡೆಯುತ್ತಿದ್ದ ಸಂಭಾವ್ಯತೆ ಕಂಡುಬರುತ್ತದೆ. 'ಬಸವರಾಜ ದೇವರ ರಗಳೆ'ಯಲ್ಲಿ ಬಸವಣ್ಣನವರ ಮಹಾಮನೆಯಲ್ಲಿ ದೇಶ ವಿದೇಶಗಳ ಜನರೆಲ್ಲ ಬಂದು ಕಲೆಯುತ್ತಿದ್ದರು. ಅಂಥ ಹಿರಿಯರನ್ನೆಲ್ಲ ಬೇರೆ ಬೇರೆ ಸಿಂಹಾಸನಗಳಲ್ಲಿ ಬಸವಣ್ಣ ಕೂಡಿಸಿ ಗೋಷ್ಠಿ ನಡೆಸುತ್ತಿದ್ದ ಎಂಬ ಅಂಶವನ್ನು ಗಮನಿಸಿದರೆ ಅಲ್ಲಿ ಶರಣರ ಅನುಭಾವಗೋಷ್ಠಿ ನಡೆದಿರುವ ಸಂಭಾವ್ಯತೆ ಕಾಲ್ಪನಿಕವಾಗಿರುವುದಿಲ್ಲ. ಹೀಗೆಂದ ಮಾತ್ರಕ್ಕೆ ಬಸವಣ್ಣನ ಮಹಾಮನೆಯೆ ಅನುಭಾವ ಮಂಟಪದ ಕ್ಷೇತ್ರ ಎನ್ನುವುದೂ ಅವ್ಯಾಪ್ತಿ ದೋಷವಾಗುತ್ತದೆ. ಶೂನ್ಯ ಸಂಪಾದನೆಗಳಲ್ಲಿ ಉಕ್ತವಾಗುವ ಕಲ್ಯಾಣದ ವರ್ಣನೆಯಲ್ಲಿ5 ಬಸವಣ್ಣನವರ ಮಹಾ ಮನೆಯ ಚಿತ್ರ ದೊರೆಯುತ್ತದೆ. ಆಶ್ಚರ್ಯ ಎಂದರೆ ಮಿಕ್ಕ ಇಂಥ ಶರಣರ ಮನೆಗಳ ಚಿತ್ರಗಳೂ ದೊರಕುತ್ತವೆ. ಬಹುಶಃ ಜೇಡರ ದಾಸಿಮಯ್ಯನ ಕಾಲದಲ್ಲಿ ಅಲ್ಲಲ್ಲಿ ನಡೆಯುತ್ತಿದ್ದ



ಶರಣರ ಗೋಷ್ಠಿಗಳು ಬಸವಣ್ಣನವರ ಕಾಲದಲ್ಲಿ ಬಸವಣ್ಣನವರ ಮನೆಯನ್ನೇ ಕೇಂದ್ರವನ್ನಾಗಿ ಮಾಡಿಕೊಂಡಿರಲು ಸಾಕು. ಆ ಮಹಾಮನೆಯೇ ಅನುಭವ ಮಂಟಪ ಆಗಿರುವುದೂ ಸಾಧ್ಯ. ಆದರೆ ಮಿಕ್ಕ ಶರಣರ ಮನೆಗಳಲ್ಲಿ ಈ ಅನುಭವ ಮಂಟಪ ನಡೆದಿಲ್ಲ ಎಂದು ವಾದಿಸುವುದು ತಪ್ಪಾಗಬಹುದು. ಏಕೆಂದರೆ ಶೂನ್ಯ ಸಂಪಾದನೆಯಲ್ಲಿ ಮೊದಲ ಎರಡು ಸಂಪಾದನೆಗಳು ನಡೆಯುವುದು ಮುಕ್ತಾಯಕ್ಕ ಹಾಗೂ ಸಿದ್ಧರಾಮರ ಕ್ಷೇತ್ರಗಳಲ್ಲಿ. ಅನಂತರ ಸಿದ್ಧರಾಮ - ಅಲ್ಲಮರಿಬ್ಬರೂ ಬಸವಣ್ಣನವರಲ್ಲಿಗೆ ಬಂದಾಗ 'ಆದಿಯ ಲಿಂಗವ ಮೇದಿನಿಗೆ ತಂದು, ಮರ್ತ್ಯಲೋಕದಲ್ಲಿ ಮಹಾ ಮನೆಯ ಕಟ್ಟಿದನಯ್ಯಾ ಸಂಗನ ಬಸವಣ್ಣನು' 6 ಎಂದು ಹೇಳುವ ಮಾತಿನಲ್ಲಿ ಬಸವಣ್ಣನ ಮನೆಯನ್ನೇ ಮಹಾ ಮನೆಯಾಗಿ ಕಾಣುವ ದೃಷ್ಟಿಯಿದೆ. ಇಷ್ಟಾದರೂ ಬಸವರಾಜದೇವರು ಪ್ರಭುದೇವರು ಬರಬೇಕೆಂದು, ಶೂನ್ಯ ಸಿಂಹಾಸನವಂ ರಚಿಯಿಸಿ, ಬರವ ಹಾರೈಸುತ್ತಿದ್ದರು.....(ಪು. 184) ಎಂಬ ಮಾತಿನಲ್ಲಿ ಬಸವಣ್ಣನವರ ಮನೆಯೇ ಅನುಭವ ಮಂಟಪವೂ ಆಗಿ ಅದರಲ್ಲಿ ಶೂನ್ಯ ಸಿಂಹಾಸನ ರಚಿತವಾಗಿತ್ತೆಂದು ಶಿವಗಣ ಪ್ರಸಾದಿ ಸೂಚಿಸುತ್ತಾನೆ.

ಈ ಎಲ್ಲ ಅಂಶಗಳನ್ನು ಗಮನಿಸಿದರೆ ಶೂನ್ಯಸಿಂಹಾಸನ, ಶೂನ್ಯ ಸಂಪಾದನೆ ಅನುಭ ಮಂಟಪ - ಇವುಗಳು ಸಾಂಕೇತಿಕವೂ ಆಧ್ಯಾತ್ಮಿಕವೂ ಆದ ವಿಷಯಗಳಾಗಿದ್ದು ಐತಿಹಾಸಿಕ ಸಂಗತಿಗಳೆಂದು ಆಧಾರಪೂರ್ವಕವಾಗಿ ಸಾಧಿಸಲು ಸಾಧ್ಯವಿಲ್ಲವಾದರೂ ಶೂನ್ಯಸಂಪಾದನೆ ಗ್ರಂಥಗಳು ಐತಿಹಾಸಿಕ ವಿಷಯಗಳಾಗಿದ್ದಂತೆ ಆ ತತ್ವ ಕೂಡ ವಚನ ಪರಂಪರೆಯ ಶಿಖರಾನುಭವವನ್ನು ಒಳಗೊಂಡದ್ದಾಗಿದೆ. ಶೂನ್ಯಸಿಂಹಾಸನ ಎಂಬುದು ಅಲ್ಲಮ ಪ್ರಭುವಿನ ಆಧ್ಯಾತ್ಮಿಕ ಎತ್ತರದ ಸಂಕೇತವಾದಂತೆ ಭೌಕಿಕತವಾದ ಒಂದು ವಸ್ತುವಾಗಲಾರದು. ಶಾರದಾಪೀಠ, ಶೂನ್ಯ ಸಿಂಹಾಸನ - ಇಂಥ ಪದಸಮುಚ್ಚಯಗಳು ಧ್ವನಿಸುವ ಅರ್ಥಗಳು ಒಂದು ಪರಂಪರೆಯ ಸಾಂಸ್ಕೃತಿಕ ಮಹತ್ವವನ್ನು ಗುರುತಿಸಲು ಕಾರಣವಾಗುವಂಥವು. ಇಂಥ ಒಂದು 'ಅನುಭವ' ಸಂಪಾದನೆಗೆ ಕಾರಣವಾಗುವ ಕ್ಷೇತ್ರವೇ ಅನುಭವ ಮಂಟಪ.

ಆದರೆ, ಇಲ್ಲೊ ಇಂಥದೇ ಒಂದು ಊರಿನ ಇಂಥದೇ ಒಂದು ಕಟ್ಟಡಗಳಲ್ಲಿ 'ಅನುಭವ ಮಂಟಪ' ನಡೆಯಿತೆನ್ನುವುದು, ತಪ್ಪಾಗುತ್ತದೆ. ಈವರೆಗಿನ ಐತಿಹ್ಯಗಳನ್ನು ಹಾಗೂ ಸಂಗತಿಗಳನ್ನು ಗಮನಿಸಿದರೆ 'ಅನುಭವ ಮಂಟಪ' ಶಬ್ದಸಮುಚ್ಚಯದ ಅಸ್ತಿತ್ವ ಹದಿನೈದನೆಯ ಶತಮಾನದ್ದಾಗುತ್ತದೆ. (ಕಾಲಜ್ಞಾನದ ವಚನಗಳಲ್ಲಿ ಬರುವ ಆ ಶಬ್ದಗಳನ್ನು ಖಚಿತ ಆಧಾರವಾಗಿಟ್ಟುಕೊಳ್ಳಲು ಸಾಧ್ಯವಾಗದು. ಏಕೆಂದರೆ, ಆ ವಚನಗಳ ರಚನೆ ಹಾಗೂ ಕಾಲಗಳು ತೀರಾ ಸಂದಿಗ್ಧವಾದುವುಗಳು.) ಅನುಭವ ಮಂಟಪದಲ್ಲಿ ನಡೆದ ಹಾಗೂ ನಡೆದಿರಬಹುದಾದ ಚರ್ಚೆಗಳು ಇತಿಹಾಸದ ಗರ್ಭದಲ್ಲಿ ಅಡಗಿಹೋಗಿದೆ. ಆದರೆ, ಇಂಥ ಚರ್ಚೆಗಳು ನಡೆದ ಸೂಚನೆಗಳು ಮಾತ್ರ ಜೇಡರ ದಾಸಿಮಯ್ಯನ 'ಸುಳ್ನುಡಿಗಳು ಎಂಬ ಸಂದರ್ಭದಲ್ಲಿ, ಹರಿಹರನ 'ಬಸವರಾಜದೇವರ ರಗಳೆ' ಹಾಗೂ 'ಮಹಾದೇವಿಯಕ್ಕನ ರಗಳೆ'ಗಳಲ್ಲಿ ಬರುವ 'ಗೀತಗೋಷ್ಠಿ' ಪದಪುಂಜಗಳಲ್ಲಿ ಹಾಗೂ ಬಸವಣ್ಣನ ಮಹಾಮನೆಯಲ್ಲಿ ನೆರೆದ ಶರಣರ

ಗೋಷ್ಠಿಗಳ ಹಿನ್ನೆಲೆಯಲ್ಲಿ ಮತ್ತು ಶೂನ್ಯ ಸಂಪಾದನೆಯಲ್ಲಿ ಉಲ್ಲೇಖಿತವಾಗುವ ಸಂಪಾದನೆಯ ಘಟನೆಗಳಲ್ಲಿ ದಟ್ಟವಾಗುತ್ತವೆ.

* ವಿವರಗಳಿಗೆ 'ವಚನ ಒಂದು ಸಾಮೂಹಿಕ ಸೃಷ್ಟಿ' ಎಂಬ ಇದೇ ಲೇಖಕರ ಲೇಖನ ನೋಡಿ.

1. ಜೇಡರ ದಾಸಿಮಯ್ಯನ ವಚನಗಳು (ಸಂ. ಪ್ರೊ. ಆರ್. ರಾಚಪ್ಪ, 1988) ವ. 85.
2. ಜೇಡರ ದಾಸಿಮಯ್ಯನ ವಚನಗಳು (ಸಂ. ಪ್ರೊ. ಆರ್. ರಾಚಪ್ಪ, 1988).
3. ಬಸವರಾಜ ದೇವರ ರಗಳೆ (ಸಂ. ಎಚ್. ದೇವೀರಪ್ಪ) (1981) ಪು. 54-55.
4. ಉತ್ತಂಗಿ ಚೆನ್ನಪ್ಪ : ಅನುಭವ ಮಂಟಪದ ಐತಿಹಾಸಿಕತೆ, ಪು. 37.
5. ಚನ್ನಬಸವಣ್ಣನವರ ವಚನಗಳು (ಸಂ. ಡಾ|| ಆರ್.ಸಿ. ಹಿರೇಮಠ) ಪು. 151, ವ. 345.
6. ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯ ಸಂಪಾದನೆ (ಸಂ. ಡಾ|| ಎಲ್. ಬಸವರಾಜು) ಪು. 72

(ಸೌಜನ್ಯ : ಶರಣ ಸಂಪದ)

## ಹೊಸವರ್ಷದ ಶುಭಾಶಯಗಳು

ಪರಮಪೂಜ್ಯ, ನಿರಂಜನ ಪ್ರಣವಸ್ವರೂಪಿ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಶುಭಾಶೀರ್ವಾದ ಹಾಗೂ ಮಾರ್ಗದರ್ಶನದಿಂದ **"ಸಿದ್ಧಗಂಗಾ"** ಪತ್ರಿಕೆ ಮೂವತ್ತೂರು ವಸಂತಗಳ ಸಿಹಿಕಹಿಯನ್ನುಂಡು ಮೂವತ್ತನಾಲ್ಕನೆ ವರ್ಷಕ್ಕೆ ಕಾಲಿಡುತ್ತಿರುವ ಅಭಿಮಾನದ ಸಂಗತಿ. ಪತ್ರಿಕೆ ಮುನ್ನಡೆಯಲು ಲೇಖಕರು, ಓದುಗರು, ಚಂದಾದಾರರು ಹಾಗೂ ಜಾಹಿರಾತುದಾರರು ಎಲ್ಲ ರೀತಿಯಿಂದಲೂ ಸಹಕಾರ ನೀಡುತ್ತಾ ಬಂದಿರುವುದಕ್ಕೆ ಈ ಸಂದರ್ಭದಲ್ಲಿ ಕೃತಜ್ಞತೆಯನ್ನು ಸ್ಮರಿಸುತ್ತಾ, ಇನ್ನೂ ಮುಂದೆಯೂ ಇದೇ ರೀತಿಯ ಸಹಕಾರವನ್ನು ಆಶಿಸುತ್ತಾ ತಮಗೆಲ್ಲಾ ಹೊಸ ವರ್ಷದ ಶುಭಾಶಯಗಳನ್ನು ಕೋರುತ್ತೇವೆ.

ಸಿದ್ಧಗಂಗಾ ಮಾಸ ಪತ್ರಿಕೆ ಜನವರಿ ಸಂಚಿಕೆಯಿಂದ ಆಕಾರದಲ್ಲಿ ಬದಲಾವಣೆಗೊಂಡು ವಿನ್ಯಾಸ, ಉತ್ತಮ ಮುದ್ರಣ ಮೊದಲಾದವುಗಳಿಂದ ಹೊರಬರಲಿದೆ ಎಂದು ತಿಳಿಸಲು ಸಂತೋಷವಾಗುತ್ತದೆ.

-- **ಪ್ರಕಾಶಕರು**



### ಜೀವನ ದರ್ಶನದ ದಿಗಂತ

# ಡಾ|| ಕೋಟ ಶಿವರಾಮ ಕಾರಂತ

-- **ಗೊ. ರು. ಚನ್ನಬಸಪ್ಪ**
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು



"ಅನೇಕ ಮಹನೀಯರನ್ನು ಆಶ್ರಯಿಸಿ, ನಾನಾ ಗ್ರಂಥಗಳನ್ನು ಆಧರಿಸಿ, ಅಪಾರ ಶ್ರಮವಹಿಸಿ ಬರೆದಿರುವ ಈ ಗ್ರಂಥವನ್ನು ಓದುಗ ಮಹಾಶಯರು ಆದರದಿಂದ ಬರಮಾಡಿಕೊಳ್ಳುತ್ತಾರೆಂದು ನಂಬಿದ್ದೇನೆ. ಈ ಕೃತಿಯಲ್ಲಿ ಬರುವ ಪಾತ್ರಗಳೆಲ್ಲ ಕೇವಲ ಕಲ್ಪಿತ. ಇಲ್ಲಿನ ವಿಚಾರಗಳು ಯಾರನ್ನೂ ಉದ್ದೇಶಿಸಿದವಲ್ಲ. ಇದರಿಂದ ಆಕಸ್ಮಿಕವಾಗಿ ಯಾರಿಗಾದರೂ ನೋವುಂಟಾಗುವಂತಿದ್ದರೆ ದಯಮಾಡಿ ಕ್ಷಮಿಸಬೇಕಾಗಿ ಬಿನ್ನವಿಸಿಕೊಳ್ಳುತ್ತೇನೆ. ಓದುಗರ ಸಹಾನುಭೂತಿಯೇ ನನ್ನ ಬೆನ್ನಿಗೆ ರಕ್ಷೆ".

ಇವು ನಮ್ಮ ಕೆಲವು ಗ್ರಂಥಕರ್ತರು ತಮ್ಮ ಕೃತಿಗಳ ಪೀಠಿಕೆಯಲ್ಲಿ ಸಾಮಾನ್ಯವಾಗಿ ಹೇಳುವ ಮಾತುಗಳು. ಹೀಗೆ ಹೇಳಿ ಆ ಕೃತಿಯನ್ನು 'ಮುಕ್ಕೋಟಿ ಕನ್ನಡಿಗರ ಪಾದಾರವಿಂದಗಳಿಗೆ' ಅರ್ಪಿಸುವುದು ಪದ್ಧತಿ (ಇದು ಬಹುತೇಕ ಗ್ರಂಥಕರ್ತರ ಸ್ಥಿತಿ!). ಇಂತಹ ಮಾತುಗಳನ್ನು ಕಂಡಾಗ ಓದುಗನಿಗೆ ಸ್ವಾಭಾವಿಕ ಸಹಾನುಭೂತಿ!

ಆದರೆ, ಈ ಮಾತುಗಳನ್ನು ನೋಡಿ : "ಈ ಗ್ರಂಥವನ್ನು ಓದಬೇಕೆಂದು, ಇದನ್ನು ಬರೆದವನು ಯಾರನ್ನೂ ಆಗ್ರಹಪಡಿಸುವುದಿಲ್ಲ. ಓದದಿರುವ ಸ್ವಾತಂತ್ರ್ಯವಿರಲು, ಓದಿ ಸಿಟ್ಟಾಗುವುದು ಥರವಲ್ಲ......"

ಇತಿ, ಬರೆದವ, ಆ ತಪ್ಪಿಗೆ"

ಇವು ಡಾ|| ಕೋಟ ಶಿವರಾಮ ಕಾರಂತರು ತಮ್ಮ ಕೃತಿಯೊಂದರ ಪೀಠಿಕೆಯಲ್ಲಿ ಹೇಳಿರುವ ಮಾತುಗಳು. ಅದು ಅವರ ವಿಡಂಬನ ಸಾಹಿತ್ಯದ 'ಗ್ನಾನ' ಎಂಬ 'ಮಹಾ ಪವಿತ್ರ ಗ್ರಂಥ!' ಅದನ್ನು ಅವರು ಅರ್ಪಿಸಿರುವುದು ಓದುವವರಿಗಲ್ಲ; ಓದದವರಿಗೆ!

"ಏನು ವಿಚಿತ್ರ! ಓದಬೇಕೆಂದು ಆಗ್ರಹಪಡಿಸುವುದಿಲ್ಲ ಎನ್ನುವವರು ಬರೆದುದಾದರೂ ಏಕೆ?" ಎಂದು ಒಮ್ಮೆ ನನ್ನ ಗೆಳೆಯ ಕೇಳಿದ. ಆಗ ನಾನು

'ಪದ್ಧತಿ'ಯ ಪೀಠಿಕೆಯ ಮಾತುಗಳನ್ನು ಪ್ರಸ್ತಾಪಿಸಿ, "ಇಲ್ಲಿನ ವಿಚಾರಗಳು ಯಾರನ್ನೂ ಉದ್ದೇಶಿಸಿದವಲ್ಲ ಎಂದು ಹೇಳುವವರು ಬರೆಯಬೇಕಾದರೂ ಯಾಕೆ?" ಎಂಬ ಮರು ಪ್ರಶ್ನೆ ಹಾಕಿದೆ ಆತ ಸುಮ್ಮನಾದ!

ಡಾ|| ಶಿವರಾಮ ಕಾರಂತರ ವಿಚಾರಧಾರೆಯ ವಿದ್ಯುತ್ ಸಂಚಾರವಾಗುವುದೇ ಇಂತಹ ಮಾತುಗಳಿಂದ. ಆ ವಿದ್ಯುಚ್ಛಕ್ತಿಯನ್ನು ಬಳಸಿಕೊಳ್ಳುವುದು 'ಬಲ್ಪ್' ಆದರೆ ಕೂಡಲೇ ಬೆಳಕು; 'ಟ್ಯೂಬ್' ಆದರೆ ಸ್ವಲ್ಪ ತಡ. ('ಬಲ'ವಿಲ್ಲದವರಿಗೆ ಕಾರಂತರು ಬರೀ 'ಎಡ'!)

ವಿಜ್ಞಾನದಲ್ಲಿ 'ರಾಮನ್ ಇಫೆಕ್ಟ್' ಇದ್ದಂತೆ ಸಾಹಿತ್ಯದಲ್ಲಿ 'ಕಾರಂತ್ ಇಫೆಕ್ಟ್!' ಬದುಕಿನ ಸಮಸ್ತ ರಂಗಕ್ಕೂ ಅವರ ವಿಚಾರದ ಸ್ಪರ್ಶವಾಗಿದೆ. ಅವರೊಂದು ವಿರಾಟ್ ಶಕ್ತಿ. ಹುಟ್ಟುತ್ತಲೇ ಕುತೂಹಲ ಕಟ್ಟಿಕೊಂಡು ಬಂದ ವ್ಯಕ್ತಿ. ಬದುಕನ್ನು ಸದಾ ಬಗೆದು ನೋಡುವಲ್ಲೇ ಆಸಕ್ತಿ!

ಕಾರಂತರ ಊರು ದಕ್ಷಿಣ ಕನ್ನಡದ ಕೋಟ. ತಂದೆ 'ಐಗಳ ವೃತ್ತಿ'ಯಿಂದ ತಿಂಗಳಿಗೆ ಎಂಟಾಣೆ ಸಂಬಳದ ಮೇಲೆ ಜೀವನ ಆರಂಭಿಸಿದ ಶ್ರೀ ಶೇಷ ಕಾರಂತರು; ತಾಯಿ ಶ್ರೀಮತಿ ಲಕ್ಷ್ಮಿ.

ಅರಬ್ಬೀ ಸಮುದ್ರ, ಪಶ್ಚಿಮ ಘಟ್ಟ, ಮಧ್ಯೇಇದ್ದ ಜನ ಜೀವನ - ಇವು ಬಾಲಕ ಕಾರಂತರ ಮೇಲೆ ಬೀರಿದ ಪ್ರಭಾವ, ಮಾಡಿದ ಪರಿಣಾಮ ಅನಂತ. ಸಾಗರದ ಗಾಂಭೀರ್ಯ, ಪರ್ವತದ ಅಚಲತೆ, ಬದುಕಿನ ಸಂಕೀರ್ಣತೆ - ಒಂದೊಂದೂ ಕಾರಂತರಿಗೆ ಸ್ಫೂರ್ತಿಯಾಗಿದೆ; ಮೂರ್ತಿಯನ್ನಾಗಿಸಿದೆ; ಈ ಕೀರ್ತಿ ತಂದಿವೆ.

**ವಿದ್ಯಾಭ್ಯಾಸ :**

ಶಾಲೆ ಕಲಿತದ್ದು ಕುಂದಾಪುರದಲ್ಲಿ. ಮಂಗಳೂರಿನಲ್ಲಿ ಕಾಲೇಜಿಗೆ ಪ್ರವೇಶ. ಆಗಲೇ ಗಾಂಧೀಜಿ ಅವರ ಅಸಹಕಾರ ಚಳವಳಿಯ ಗಾಳಿ. ಸ್ವಾಭಿಮಾನದ ಈ ಸಿಡಿಲ ಮರಿ ತಡಮಾಡಲೇ ಇಲ್ಲ. ಕಾಲೇಜ್ ಕಾಂಪೌಂಡ್ ಹೊರಕ್ಕೆ ಹಾರಿಯೇ ಬಿಟ್ಟಿತು. ಲೋಕ ಜೀವನ ಶಿಕ್ಷಣದ ಹೊರ ಆವರಣವನ್ನು ಸೇರಿಯೇ ಬಿಟ್ಟಿತು! (ಬಯಲ ಚೇತನ ಬಂಧನದಲ್ಲಿ ಹೇಗಿದ್ದೀತು?)

ಅದಮ್ಯ ಸ್ವಾತಂತ್ರ್ಯ ಪ್ರೇಮ. ಗಾಂಧೀಜಿ ವಿಚಾರ ಪ್ರಚಾರಕ್ಕಾಗಿ ಅಲೆದಾಟ. ಚಳುವಳಿಯ ಹೋರಾಟ. ಪರಿಣಾಮವಾಗಿ ಜೀವನದ ವಾಸ್ತವತೆಯನ್ನು ಕಣ್ಣಾರೆ ಕಂಡುಕೊಳ್ಳುವ ಅವಕಾಶ.

ಕಾರಂತರು ಮೊಟ್ಟಮೊದಲ ಬಾರಿಗೆ ಹತ್ತು ಜನರ ಬಾಯಿಗೆ ಬಿದ್ದದ್ದು ಪುತ್ತೂರು ದಸರಾ ಹಬ್ಬದಿಂದ. ಅದು ಅವರೇ ಆರಂಭಿಸಿದ ಸಂಘಟನೆ. ಕ್ರೀಡೆ-ಸಾಹಿತ್ಯ-ಮನರಂಜನೆಗಳ ಸಂಯೋಜನೆ ಪುತ್ತೂರು ದಸರಾ ಹಬ್ಬ. ನಾಡಿನ ಸಾಂಸ್ಕೃತಿ



ಚಟುವಟಿಕೆಗಳಲ್ಲಿ ಒಂದು ಸ್ಮರಣೀಯ ವೇದಿಕೆ. ಅದು ನಾಡಿಗೆ ಕಾರಂತರು ನೀಡಿದ ಕಾಣಿಕೆ!

**ಪತ್ರಿಕೋದ್ಯಮ :**

ಸಾಹಿತ್ಯ ಲೋಕಕ್ಕೆ ಪ್ರವೇಶಿಸಿದುದು ಪತ್ರಿಕೋದ್ಯಮದ ಬಾಗಿಲ ಮೂಲಕ. 1924ರಲ್ಲಿ 'ವಸಂತ' ಪಾಕ್ಷಿಕದ ಆರಂಭ. ಸಂಪಾದನೆ, ಪ್ರಕಟನೆ ಎಲ್ಲ ಹೊಣೆಯೂ ಅವರದೇ. 'Less to entertain and more to enlighten'. ಆ ಪಾಕ್ಷಿಕದ ಉದ್ದೇಶ. ಕಾರಂತರ ಅಂತರಂಗದಲ್ಲಿ ಕುದಿಯುತ್ತಿದ್ದ ವಿಚಾರಗಳ ವಾಹನವಾಗಿ 'ವಸಂತ' ಸಲ್ಲಿಸಿದ ಸೇವೆ ಅನುಪಮ. ಅದರ ಒಡಲು ಗಾಂಧೀಜಿ ಆದರ್ಶದ ತತ್ವಗಳ ತೊಟ್ಟಿಲಾಗಿದ್ದಂತೆ ವಿಧವಾ ವಿವಾಹ, ಅಂಧ ಶ್ರದ್ಧೆಗಳಂತಹ ದುಷ್ಟ ಸಂಪ್ರದಾಯದ ವಿರುದ್ಧ ಸಿಡಿದೇಳುವ ಬೆಂಕಿಯ ಮಡಿಲೂ ಆಗಿತ್ತು.

ಗೋವಿಂದ ಪೈ, ಕುವೆಂಪು, ಬೆಟಗೇರಿ, ಕಸ್ತೂರಿ ಮೊದಲಾದವರೆಲ್ಲಾ 'ವಸಂತ' ಲೇಖಕರ ಬಳಗ. ಹಣದ ಅನುಕೂಲವೊಂದನ್ನು ಬಿಟ್ಟು ಉಳಿದಂತೆ ಅದು ಶ್ರೀಮಂತವಾಗಿತ್ತು! ಫಲವಾಗಿ ಸಹಜ ಬಾಲಗ್ರಹ ಪೀಡೆಗೆ ತುತ್ತಾಯಿತು. ಮೂರು ವರ್ಷ ಕಳೆದು ಮತ್ತೆ ಮಾಸಿಕವಾಗಿ ಉದಯವಾದ 'ವಸಂತ' ಚಂದಾದಾರರ 'ಔದಾರ್ಯದ' ಉರುಳಲ್ಲಿ ಸಿಕ್ಕಿ ಕೊನೆಗೊಮ್ಮೆ ಅಂತಿಮವಾಗಿ ಕಣ್ಮುಚ್ಚಿಕೊಂಡಿತು!

'ವಸಂತ' ಕಣ್ಮುಚ್ಚಿ ಐವತ್ತು ವರ್ಷಗಳೇ ಕಳೆದಿವೆ. ಆದರೆ ಅದು ಇಂದಿಗೂ ಹೊಂದಿಕೊಳ್ಳುವಂತಹ ಪತ್ರಿಕೆ. ಮುಂದಿನವರೂ ಒಪ್ಪುವಂತಹ ವಿಚಾರಧಾರೆ. ಏನೇ ಇದ್ದರೂ 'ವಸಂತ' ಬೆಳೆದು ದೊಡ್ಡದಾಗಿ ಅದರ ನಿರ್ವಹಣೆಯ ಹೊರೆಯಿಂದ ಕಾರಂತರಿಗೆ 'ಶ್ರಮ'ವಾದೀತೆಂದು 'ಮುನ್ನೆಚ್ಚರ'ವಹಿಸಿ ಆರಂಭದಲ್ಲೇ ಅದಕ್ಕೆ ಅಂತಿಮ ಗೀತೆ ಹಾಡಿದ 'ಹೆಮ್ಮೆ'ಯ ಪೀಳಿಗೆ ನಮ್ಮದು!

'ರಾಷ್ಟ್ರಗೀತ ಸುಧಾಕರ' ಕಾರಂತರ ಏಕಮಾತ್ರ ಕವನ ಸಂಗ್ರಹ. ಮುದ್ರಣ ಕಂಡ ಮೊದಲ ಕೃತಿ 'ವಿಚಿತ್ರ ಕೂಟ' ಮೊದಲ ಕಾದಂಬರಿ (ಪತ್ತೇದಾರಿ). ನಂತರ ಅವರ ಸಾಹಿತ್ಯ ಕೃತಿಗಳ 'ಮಹಾಪೂರ'ವೇ ಬಂದಿದೆ. ಈ ಮಹಾಪೂರ ಅನಾಹುತವಲ್ಲ. ದೊಡ್ಡ ಉಪಕಾರ. ಹರಿದ ಕಡೆ ಇದ್ದ ದುರ್ಬಲ ಗುಡಿ-ಗುಂಡಾರಗಳು ಮುಳುಗಿ ಹೋಗಿವೆ. ದೃಢ ಕಟ್ಟಡಗಳ ಕೊಳೆ ಕೊಚ್ಚಿ ಹೋಗಿದೆ! ಪಾತ್ರದ ದಡಗಳಲ್ಲಿ ಫಲವತ್ತಾದ ಮೆಕ್ಕಲು. ಅಲ್ಲಿ ಬಿತ್ತಿ ಬೆಳೆಯುವವರಿಗೆ ಒಳ್ಳೆಯ ಫಸಲು!

**ಕಾರಂತರ ಸಾಹಿತ್ಯ ಪ್ರಪಂಚ :**

ಕಳೆದ ಐದು ದಶಕಗಳಲ್ಲಿ ಸೃಷ್ಟಿಯಾಗಿರುವ ಕಾರಂತರ ಸಾಹಿತ್ಯವೇ ಒಂದು ಪ್ರಪಂಚ. ಅದು ಕಾರಂತ ಪ್ರಪಂಚ. ವಿಶ್ವ ಬದುಕಿನ ಸಾರ ಸಂಗ್ರಹ. ಕವನ, ಕಥೆ, ಕಾದಂಬರಿ, ನಾಟಕ, ಪ್ರಬಂಧ, ಹರಟೆ, ವ್ಯಂಗ್ಯ ಕಲೆ, ವಿಜ್ಞಾನ, ಪ್ರವಾಸ, ಜೀವನ

ವೃತ್ತ, ತತ್ತ್ವ, ವಿಚಾರ ಬಾಲ ಸಾಹಿತ್ಯ, ಪಠ್ಯ ವಿಷಯ, ಅನುವಾದ ಇತಿಹಾಸ, ಪ್ರಾಚೀನ ಕಾವ್ಯ, ಶಿಲ್ಪ, ಶಿಲಾಶಾಸನ, ಪತ್ರಿಕೆ, ಜಾನಪದ - ಹೀಗೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಬಂದಿರುವ ಸಮೃದ್ಧ ಬೆಳೆ. ಒಟ್ಟು ಕೃತಿಗಳ ಸಂಖ್ಯೆ ಇನ್ನೂರು ದಾಟಿರಬಹುದು. ಇವುಗಳಲ್ಲಿ ನಾಟಕ - ಕಾದಂಬರಿಗಳದ್ದೇ ಹೆಚ್ಚಿನ ಪಾಲು. ನಾಟಕಗಳ ಸಂಖ್ಯೆ ಐವತ್ತಕ್ಕೂ ಹೆಚ್ಚಿರಬಹುದು. ಕಾದಂಬರಿಗಳ ಸಂಖ್ಯೆ ನಲವತ್ತರಷ್ಟು. ಪಠ್ಯ ಪುಸ್ತಕಗಳೇ ಇಪ್ಪತ್ತಮೂರು ಇನ್ನು ಬಿಡಿ ಬರಹಗಳ ಸಂಖ್ಯೆ ಸಾವಿರದ ಗಡಿ ದಾಟಿರುವ ಅಂದಾಜು.

**ವಿಶ್ವಕೋಶ :**

ಕಾರಂತರ ವೈಯಕ್ತಿಕ ಸಾಹಸ ಸಾಮರ್ಥ್ಯಕ್ಕೆ ಅವರ 'ಬಾಲ ಪ್ರಪಂಚ', 'ವಿಜ್ಞಾನ ಪ್ರಪಂಚ'ಗಳೇ ಸಾಕ್ಷಿ. ಹತ್ತು ಜನರ ಸಂಸ್ಥೆ ಮಾಡುವಂತಹ ಕೆಲಸವನ್ನು ಒಬ್ಬರೇ ಮಾಡಿದ್ದಾರೆ ಕನ್ನಡ ಓದುಗರಿಗೆ ಜ್ಞಾನ ಕೋಶವನ್ನೇ ಒದಗಿಸಿದ್ದಾರೆ. ಅವರೇ ಒಂದು 'ವಿಶ್ವಕೋಶ'ವೆಂದರೆ ಚೆನ್ನಾಗಿ ಸಲ್ಲುತ್ತದೆ.

ಒಮ್ಮೊಮ್ಮೆ ಲೇಖನಿಯನ್ನು ಕೈಗೆತ್ತಿಕೊಳ್ಳದ ನಿರ್ಲಿಪ್ತತೆ. ಹಿಡಿದರೆ ಮನಸ್ಸಿಗೆ ಬಂದ ಮೂರ್ತಿಯನ್ನು ಕಡದೇ ಬಿಡುವ ತಲ್ಲೀನತೆ. ಕತೆಯಾಗಲೀ, ಕಾದಂಬರಿಯಾಗಲೀ ಒಂದೇ ಹಿಡಿತದಲ್ಲಿ ಬರೆದು ಮುಗಿಸುವ ಅಭ್ಯಾಸ. 'ಚೋಮನ ದುಡಿ', 'ಸರಸಮ್ಮನ ಸಮಾಧಿ'ಯಂತಹ ಕಾದಂಬರಿಗಳು ಕೇವಲ ಐದ್ಕೈದು ದಿನಗಳಲ್ಲಿ ಮೂಡಿ ಬಂದ ಕೃತಿಗಳು. ಮುವ್ವತ್ತು ಅಧ್ಯಾಯಗಳ 'ಮರಳಿ ಮಣ್ಣಿಗೆ' ಮುದ್ರಣಕ್ಕೆ ಸಿದ್ಧವಾದುದು ಮುವ್ವತ್ತು ದಿನಗಳಲ್ಲಿ. 'ಮುಗಿದ ಯುದ್ಧ'ಕ್ಕೆ ಬೇಕಾದುದು ಮೂರು ವಾರ ಮಾತ್ರ.

ಕಾರಂತರ ಕೃತಿಗಳಲ್ಲಿ ನಾವು ಕಾಣುವುದು ಈ ಲೋಕದ ವೈವಿಧ್ಯಮಯ ಬದುಕನ್ನು; ಆ ಬದುಕಿನ ವಿಶಿಷ್ಟ ವೈಭವವನ್ನು; ದುರ್ಭರ ದುರಂತವನ್ನು. ವ್ಯಕ್ತಿ ಮತ್ತು ಸಮಾಜದ ಸುಲಕ್ಷಣ-ವಿಲಕ್ಷಣ, ಸೌಜನ್ಯ-ದೌರ್ಜನ್ಯ ಸಾಹಸ-ಸೋಮಾರಿತನ ಕೃತಿ-ವಿಕೃತಿ ಎಲ್ಲವನ್ನೂ ನಾವಿಲ್ಲಿ ಕಾಣುತ್ತೇವೆ ಇವೆಲ್ಲ ವಿರೋಧ ಗುಣಗಳು ಸಹಜ ವಿರಸದೊಡನೆ ಸರಸವಾಡಿರುವುದೂ ಉಂಟು; ಬದುಕಿನ ನಗ್ನತೆಯ ದರ್ಶನ ಮಾಡಿಸಿರುವುದುಂಟು.

ಕಾರಂತರ ಸಾಹಿತ್ಯದ ಪರಮ ಗುರಿ ಬದುಕಿನ 'ಪರಿಪೂರ್ಣತೆ'. 'ಜೀವನವಿರುವುದೇ ಜೀವಿಸುವುದಕ್ಕೆ. ಅದನ್ನು ಉಪೇಕ್ಷಿಸುವುದು ಅಪಜಯದ ಮಾತು' ಎನ್ನುವ ಸಿದ್ಧಾಂತ. ಬದುಕು ಕಲಾತ್ಮಕವಾಗಬೇಕೆನ್ನುವ ರಸಋುಷಿ ಶಿವರಾಮ ಕಾರಂತ. 'ಕಲೆ' ಎನ್ನುವುದು ಅವರ ದೃಷ್ಟಿಯಲ್ಲಿ ಶೃಂಗಾರವಲ್ಲ; ವಿನೋದವೂ ಅಲ್ಲ. ಅದು 'ವಸ್ತುವಿನ ಅನ್ವಯ, ಅರ್ಥ, ಅಂದ ಮತ್ತು ರಹಸ್ಯಾನುಭವಕ್ಕೆ ಮಹಾದ್ವಾರ!'

ಧರ್ಮ, ದೇವರು, ಆಧ್ಯಾತ್ಮ ಪುರಾಣ - ಇವುಗಳಿಗೆ ಕಾರಂತರು ತಮ್ಮದೇ ಆದ ಅರ್ಥ ನೀಡಿದ್ದಾರೆ. ಕೆಲವು ಸಂದರ್ಭದಲ್ಲಿ ಸರಿಯಾದ ಶಸ್ತ್ರಚಿಕಿತ್ಸೆಯನ್ನೇ ನಡೆಸಿದ್ದಾರೆ.



ತಮಗೆ ಸೂಕ್ತ, ನ್ಯಾಯ ಮತ್ತು ಸತ್ಯವೆಂದು ಕಂಡದ್ದರಲ್ಲೇ ನಂಬಿಕೆ. ಅದೂ ದಿಟ್ಟ-ದೃಢ ನಂಬಿಕೆ. 'ಸನ್ನಿವೇಶ ರಾಜಿ' ಬಳಿ ಸುಳಿಯದ ಮಾತು. ಹೇಳಬೇಕಾದುದನ್ನು ಹೇಳಿಯೇ ಬಿಡುವ ಛಲ. ನಿರ್ದಾಕ್ಷಿಣ್ಯ ಪ್ರವೃತ್ತಿ; ನಿರ್ಭೀತ ವ್ಯಕ್ತಿ!

**ಪ್ರವಾಸ :**

ಓದಿ ಕಲಿತುದಕ್ಕಿಂತ ನೋಡಿ ಕಲಿತುದೇ ಹೆಚ್ಚು. ನೋಟವೇ ಅವರ ಪಾಠ! ಹೆಚ್ಚು ನೋಡಿದವರು ಹೆಚ್ಚು ಕಲಿಯುತ್ತಾರೆಂಬ ಮಾತು ಕಾರಂತರಿಗೆ ಸೂಕ್ತ ಅನ್ವಯ. ಅವರು ಭಾರತದ ಉದ್ದಗಲವನ್ನು ಅಡ್ಡಾಡಿ ಬಂದಿದ್ದಾರೆ; ಭೂಗೋಳದ ಬಹು ಭಾಗಕ್ಕೆ ಹೋಗಿ ಬಂದಿದ್ದಾರೆ. ಪ್ರವಾಸಕ್ಕಾಗಿ ಮಾಡಿದ ವೆಚ್ಚವೆಲ್ಲ ಅವರ ಅನುಭವ ವಿಕಾಸಕ್ಕೆ ಹೂಡಿದ ಬಂಡವಾಳವಾಗಿದೆ. ಆ ಬಂಡವಾಳದಿಂದ ಬಂದ ಲಾಭವು ವಿನಿಯೋಗಕ್ಕಿಂತ ಹೆಚ್ಚು ಪ್ರಮಾಣ. ಅದರಿಂದ, ಅವರಿಗಿಂತ ಉಳಿದವರಿಗೇ ಹೆಚ್ಚು ಪ್ರಯೋಜನ!

ಪ್ರವಾಸದಲ್ಲಿ ಕಾರಂತರು ಕಂಡ (ನಾವು ಕಾಣಲಾಗದ) ಜನ-ಜನಾಂಗ-ಪದ್ಧತಿ-ಪರಂಪರೆ, ಅಭಾವ-ಸ್ವಭಾವ, ರೂಪ-ಸ್ವರೂಪ ಎಲ್ಲವನ್ನೂ ಅವರ ಕೃತಿಗಳಲ್ಲಿ ಬರುವ ಪಾತ್ರಗಳಲ್ಲಿ ಕಾಣುತ್ತೇವೆ. ಅವರ ಪ್ರವಾಸಾನುಭವ ಕೇವಲ ಸಿಹಿ ತಿನಿಸಿನ ಪೊಟ್ಟಣವಲ್ಲ; ಸಾಕಷ್ಟು ಕಹಿಯ ಕಂತೆಯೂ ದೊರೆತಿದೆ. ಇವೆರಡನ್ನೂ ಬದುಕಿನ ಆರೋಗ್ಯಕ್ಕಾಗಿ ಹದವಾಗಿ ಬೆರೆಸಿಕೊಟ್ಟ ವೈದ್ಯ ಶಿವರಾಮ ಕಾರಂತ! ಆದರೆ ಯಾವ ಮದ್ದನ್ನೂ ಸಿಹಿ ಹೊದಿಕೆ ಹಾಕಿ ಕೊಟ್ಟು ಗೊತ್ತಿಲ್ಲ. ಅವರ 'ಗುಳಿಗೆ' ನುಂಗುವುದು ತುಸು ಕಷ್ಟವೇ! ರೋಗಿಯೇ ಇದ್ದರೂ ತಮ್ಮ ಮದ್ದು ಕುಡಿಸಬೇಕೆಂಬ ಹುಚ್ಚು ಅವರದಲ್ಲ; ಅಗತ್ಯವಿದ್ದವರು ತೆಗೆದುಕೊಳ್ಳಬಹುದು!

**ನಾಟಕ ಕ್ಷೇತ್ರ :**

ನಾಟಕ ರಂಗ ಕಾರಂತರ ಅಚ್ಚುಮೆಚ್ಚಿನ ಕ್ಷೇತ್ರ. ಪರಂಪರೆಯ ಮತ್ತು ವೃತ್ತಿರಂಗಕ್ಕೆ ಭಿನ್ನವಾದ ಪ್ರಯೋಗ ನಡೆಸಿದ್ದಾರೆ. ರಂಗ ಕ್ಷೇತ್ರದ ಸುಧಾರಣೆಗಾಗಿ ಹೊಸ ಹೊಸ ತಂತ್ರ ಬಳಸಿದ್ದಾರೆ ಆ ಉದ್ದೇಶಕ್ಕಾಗಿಯೇ ಅನೇಕ ನಾಟಕಗಳನ್ನು ರಚಿಸಿದ್ದಾರೆ.

ಸಂಪ್ರದಾಯದ ಸಂಗೀತ ನಾಟಕಗಳಿಗೆ ತಮ್ಮದೇ ಆದ ಸಂಸ್ಕಾರ ನೀಡಿರು ಕಾರಂತರು ಗೀತ ರೂಪ, ನೃತ್ಯ ನಾಟಕ, ಛಾಯಾ ನಾಟಕ, ಏಕಾಂಕ ನಾಟಕ, ಮೂಕ ನಾಟಕಗಳ ಒಂದು ಪರಂಪರೆಯನ್ನೇ ಬೆಳೆಸಿದ್ದಾರೆ. ಅವರ ಕೆಲವು ಪ್ರಯೋ ತಂತ್ರಗಳು ಕಾಲದೊಡನೆ ಮರೆಯಾಗಿರಬಹುದು; ಆದರೆ ಕೆಲವಂತೂ ಇಂದಿನ ರಂಗಭೂಮಿಯಲ್ಲಿ ಜೀವಂತವಾಗಿವೆ.

ನಾಟಕ ರಚನೆಯಲ್ಲಿ ಅವರದು ವಿಶಿಷ್ಟ ಹಸ್ತ ರಚನೆಯಲ್ಲಷ್ಟೇ ಅಲ್ಲ; ಅಭಿನಯ, ನಿರ್ದೇಶನ, ನೃತ್ಯ, ಸಂಗೀತ ಎಲ್ಲದರಲ್ಲೂ ಎತ್ತಿದ ಕೈ. ಕಥಾ ವಸ್ತುವಿನ ವೈಚಾರಿಕ

ಆಯ್ಕೆ, ವಾಸ್ತವತೆಯ ಚಿತ್ರಣಕ್ಕೆ ಬೇಕಾದ ಪಾತ್ರಸೃಷ್ಟಿ, ಪಾತ್ರದ ಭಾವಾಭಿವ್ಯಕ್ತಿಗೆ ಸೂಕ್ತವಾದ ಸಂಭಾಷಣೆ, ಕಥಾ ಸಂದೇಶ ನಿರೂಪಣೆಗೆ ಅಗತ್ಯವಾದ ಹಾಗೂ ಪರಿಣಾಮಕಾರಿಯಾದ ಸಂಗೀತ, ದೃಶ್ಯ ಜೋಡಣೆಯ ಜಾಣ್ಮೆ, ನೃತ್ಯ ಸಂಗೀತಗಳ ಅರ್ಥಪೂರ್ಣ ಸಂಯೋಜನೆ - ಇವು ಕಾರಂತರ ನಾಟಕಗಳಲ್ಲಿ ಕಂಡು ಬರುವ ವೈಶಿಷ್ಟ್ಯ.

**ಜಾನಪದ :**

ಜಾನಪದ ಕಾರಂತರ ಉಸಿರು. ಅದರ ಅಮಾಯಕತೆಗೆ ಬೆರಗಾದವರು ಅವರು. ಹಳ್ಳಿ ಹಳ್ಳಿ ತಿರುಗಿ, ಕಾಡು ಮೇಡು ಅಲೆದು ಜಾನಪದದ ಅಂತರಂಗ ಸೌಂದರ್ಯವನ್ನು ಕಂಡವರು.

ಯಕ್ಷಗಾನ ಕಲೆಗೆ ಕಾರಂತರು ಬೆಲೆ ತಂದು ಕೊಟ್ಟವರು. ಕಡಲ ತೀರದಲ್ಲಷ್ಟೇ ಕೇಳಿ ಬರುತ್ತಿದ್ದ ಚಂಡೆಯ ಸದ್ದು ಭಾರತದ ಅನೇಕ ಕಡೆ ಕೇಳುವಂತಾಯಿತು; ಅದಕ್ಕೆ ವಿಶ್ವಖ್ಯಾತಿ ಗಳಿಸಿಕೊಟ್ಟವರು ಕಾರಂತರು.

ಯಕ್ಷಗಾನದ ಸಂಗೀತ, ಸಾಹಿತ್ಯ, ನೃತ್ಯ ಸಂಭಾಷಣೆ, ವೇಷ-ಭೂಷಣಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅವುಗಳಿಗೆ ನಯ-ನವುರುಗಳನ್ನು ನೀಡಿರುವ ಕಾರಂತರು ಆಧುನಿಕ ಪರಿಸರದಲ್ಲಿ ಕಣ್ಮರೆಯಾಗಿ ಹೋಗಬಹುದಾಗಿದ್ದ ಈ ಜನಪದ ಕಲೆಗೆ ಜೀವ ತುಂಬಿದ್ದಾರೆ. (ಇತರ ಕಲೆಗಳಲ್ಲೂ ಇಂತಹ ಜೀವ ತುಂಬುವ ಪುಣ್ಯಾತ್ಮರು ಬೇಕಾಗಿದ್ದಾರೆ!)

**ಕಾದಂಬರಿ ಕ್ಷೇತ್ರ :**

ಕಾದಂಬರಿ ಕ್ಷೇತ್ರದಲ್ಲಂತೂ ಕಾರಂತರದು ಶಾಶ್ವತ ದಾಖಲೆ. 'ಚೋಮನ ದುಡಿ', 'ಸರಸಮ್ಮನ ಸಮಾಧಿ', 'ಮರಳಿ ಮಣ್ಣಿಗೆ', 'ಬೆಟ್ಟದ ಜೀವ', 'ಮುಗಿದ ಯುದ್ಧ', 'ಕರುಳಿನ ಕರೆ', 'ಕುಡಿಯರ ಕೂಸು', 'ಅಳಿದ ಮೇಲೆ', 'ಔದಾರ್ಯದ ಉರುಳಲ್ಲಿ', 'ಮೂಕಜ್ಜಿಯ ಕನಸುಗಳು', 'ಬೆಟ್ಟದ ತೊರೆ' - ಮೊದಲಾದ ಕಾದಂಬರಿಗಳಲ್ಲಿ ನಡೆದಿರುವ ಬದುಕಿನ ಮಂಥನ ಅನನ್ಯ, ಅನುಪಮ.

ಪ್ರಬಂಧವಿರಲಿ, ಪರಿಚಯವಿರಲಿ, ಪ್ರವಾಸ ಕಥನವಿರಲಿ. ವಿಜ್ಞಾನ ವಿಷಯವಿರಲಿ ವಿಶ್ವಕೋಶವಿರಲಿ ಒಂದೊಂದೂ ಒಂದು ದಾಖಲೆ. ಅವರ ಪ್ರತಿಯೊಂದು ಕೃತಿಯಲ್ಲಿ ಜೀವನ ಮೌಲ್ಯಗಳ ರಹಸ್ಯ ದರ್ಶನವಿದೆ. ಕಾರಂತರು ಆದರ್ಶದ ಹಿಂದೆ ನಡೆದವರಲ್ಲ; ಅದರ ಮುಂದೆ ನಡೆದರು.

**ವಿಶ್ವ ಸಾಹಿತ್ಯಕ್ಕೆ ಕೊಡುಗೆ :**

ಕಾರಂತರ ಸಾಹಿತ್ಯ ಕನ್ನಡಕ್ಕೇನು ವಿಶ್ವ ಸಾಹಿತ್ಯಕ್ಕೇ ಕೊಡುಗೆ. ಅವರ ಕೆಲವು ಕೃತಿಗಳಾದರೂ ಆಂಗ್ಲ ಭಾಷೆಗೆ ಅನುವಾದವಾಗುವಂತಾಗಬೇಕು. ಆಗ 'ನೊಬೆಲ್' ಪ್ರಶಸ್ತಿ ಅವರ ಸಾಹಿತ್ಯಕ್ಕೆ ದೂರವಾಗಲಾರದು!



**ಪ್ರಶಸ್ತಿ :**

ಕಾರಂತರು 1956ರಲ್ಲಿ ಮೈಸೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು. ಯಕ್ಷಗಾನ ಕಲೆಗೆ ಸಲ್ಲಿಸಿದ ಸೇವೆಗಾಗಿ 1958ರಲ್ಲಿ ಸ್ವೀಡಿಷ್ ಅಕಾಡೆಮಿಯ ಕಂಚಿನ ಪದಕ. ಅದೇ ವರ್ಷ ಅವರ ಯಕ್ಷಗಾನ ಬಯಲಾಯ ಕೃತಿಗೆ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ. ಕರ್ನಾಟಕ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳು ಕಾರಂತರಿಗೆ ಗೌರವ ಡಾಕ್ಟರೇಟ್ ನೀಡಿದುದು 1963ರಲ್ಲಿ.

**ಮಹಾಸ್ವಾಭಿಮಾನಿ :**

1968ರಲ್ಲಿ ಭಾರತ ಸರ್ಕಾರದಿಂದ ಪದ್ಮಭೂಷಣ ಪ್ರಶಸ್ತಿ. ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ತಗುಲಿದಾಗ ಪ್ರತಿಭಟನೆಯ ಸಂಕೇತವಾಗಿ ಆ ಪ್ರಶಸ್ತಿಯನ್ನು ಸರ್ಕಾರಕ್ಕೆ ಹಿಂತಿರುಗಿಸಿದ ಧೀಮಂತ ವ್ಯಕ್ತಿ. ಮಹಾ ಸ್ವಾಭಿಮಾನಿ. 'ತಲೆ ಇರುವುದ ತಗ್ಗಿಸಲಿಕ್ಕಲ್ಲ' 'ಹೆಚ್ಚು-ಕಡಿಮೆಯಾಗಿಲ್ಲ'! ಎಂತಹ ಸಮಾರಂಭದಲ್ಲೂ ಅವರು ನಿರ್ಲಿಪ್ತರಂತೆಯೇ ಇರುತ್ತಾರೆ.

ಕಾರಂತರದು 'ಹುಚ್ಚು ಮನಸ್ಸಿನ ಹತ್ತು ಮುಖ!'. ಆದರೂ ಸಮಷ್ಟಿ ಹಿತದ ಒಂದೇ ದೃಷ್ಟಿ. ಆ ದೃಷ್ಟಿ ಬಹು ತೀಕ್ಷ್ಣ. ಏನೆಲ್ಲ ಕಂಡುಕೊಳ್ಳುವ ಶಕ್ತಿ ಅದಕ್ಕೆ!

ಕಲಿಯದದ ಮುಗ್ಧರ ಬಗೆಗಿಂತ 'ಕಲಿತ' ಮಹನೀಯರ ಬಗೆಗೇ ಹೆಚ್ಚು ಆತಂಕ. ಅವರ 'ಟಾರ್ಜೇಟ್' ಎಲ್ಲ ಈ ಕಲಿತವರೆನ್ನುವ ವರ್ಗವೇ. 'ಕಲಿತವ'ರಿಂದಾಗುತ್ತಿರುವ ಅಪಾಯವನ್ನು ಕಾರಂತರು ಸೂಕ್ಷ್ಮವಾಗಿ ಗಮನಿಸಿದ್ದಾರೆ. ಅವವ ಗಮನವನ್ನು, ಅಂತಹ ಅಪಾಯಕಾರಿ ಶೃತಿಗಳ ವಿರುದ್ಧ ಅವರು ಬೀಸಿರುವ ಖಡ್ಗದ ಮಿಂಚನ್ನು ಅವರ ಎಲ್ಲ ಕೃತಿಗಳಲ್ಲೂ ಕಾಣಬಹುದು. ಯಾವಾಗಲೂ ಕತ್ತಿ ಬೀಸುತ್ತಲೇ ಇರುತ್ತಾರೆಂಬ ಭಯದಿಂದ ಬಹಳ ಜನ ಹತ್ತಿರ ಹೋಗಲು ಹೆದರುವುದುಂಟು! ಆದರೆ 'ಪ್ರಾಮಾಣಿಕ'ವಾಗಿ ಹತ್ತಿರ ಹೋದವರು ಅವರ ಸಜ್ಜನಿಕೆಯ ಸರಳತೆಯ ಸೌಮ್ಯ ಸ್ಪರ್ಶದ ಲಾಭ ಪಡೆಯದೇ ಬಂದಿಲ್ಲ.

**ಜ್ಞಾನಪೀಠ ಪ್ರಶಸ್ತಿ :**

ಡಾ|| ಶಿವರಾಮ ಕಾರಂತರು ಕನ್ನಡದ ಮಹಾ ದಿಗಂತ. ಅವರ 'ಮೂಕಜ್ಜಿಯ ಕನಸು' ತಂದು ಕೊಟ್ಟ ಜ್ಞಾನಪೀಠ ಪ್ರಶಸ್ತಿ ಕನ್ನಡಿಗರಿಗೆ ಅಭಿಮಾನ ಉಂಟುಮಾಡಿದೆ.

ಹೆಸರು, ಕೀರ್ತಿ, ಪ್ರಶಸ್ತಿ, ಏನೇ ಇದ್ದರೂ ಕಾರಂತರು ಎಂದಿನ ಕಾರಂತರೇ. ಯಾವ ಬೆಡಗಿಗೂ ಮರಳಾಗದ ಶುದ್ಧ ಭಾವ; ನೆಲದ ಮೇಲೆ ನಡೆದೇ ಮುಗಿಲು ಮುಟ್ಟಿದ ದೊಡ್ಡ ಜೀವ!

# ಸಫಲ ಜೀವನದ ರಹಸ್ಯ

-- ವಿ. ಸುಬ್ರಾಯ ಅಡಿಗ

ತ್ರನಗೆ ಭಡ್ತಿ ದೊರೆಯಬೇಕೆಂದು ಪ್ರತಿಯೊಬ್ಬನೂ ಬಯಸುತ್ತಾನೆ. ವೇತನ ಪಡೆಯುವವನಿದ್ದರೆ ಅಧಿಕಾರಿಯಾಗುವ ಆಸೆ. ವ್ಯಾಪಾರಿಯಾಗಿದ್ದರೆ ಹೆಚ್ಚು ಲಾಭಗಳಿಸುವ ಇಚ್ಛೆ. ವಕೀಲನಾದರೆ ತಾನು ಹಿಡಿದ ಕೇಸುಗಳೆಲ್ಲ ಸಫಲವಾಗಲೆಂಬ ಹಂಬಲ, ಡಾಕ್ಟರನಾದರೆ ರೋಗಿಗಳ ಸಾಲೇ ನಿಲ್ಲಲೆಂಬ ಆಕಾಂಕ್ಷೆ. ಆದರೆ ವಾಸ್ತವಿಕ ಸಫಲತೆಗೆ ಸಾಧನಗಳು ಪವಿತ್ರವಾಗಿದ್ದು ಇತರರಿಗೆ ಯಾವುದೇ ರೀತಿಯ ಅನ್ಯಾಯ ಅಥವಾ ತೊಂದರೆ ಆಗಬಾರದು.

ಪ್ರಪಂಚದ ಸಾವಿರಾರು ಸಫಲ ಹಾಗೂ ವಿಫಲ ವ್ಯಕ್ತಿಗಳ ಬಗ್ಗೆ ನಡೆಸಿದ ಅಧ್ಯಯನದಿಂದ ಎರಡು ಸಂಗತಿಗಳು ಸ್ಪಷ್ಟವಾದವು.

ಸಫಲ ವ್ಯಕ್ತಿಗಳು ಯಾವಾಗಲೂ ಗುರಿಯನ್ನೇ ಎದುರಿಗಿಟ್ಟುಕೊಂಡು ಕೆಲಸ ಮಾಡುತ್ತಿದ್ದರು. ಪ್ರತಿಫಲದ ಆಸೆಯಿಲ್ಲದೆಯೇ ಹೆಚ್ಚು ಉತ್ತಮ ಕೆಲಸ ಮಾಡುತ್ತಿದ್ದರು. ವಿಫಲ ವ್ಯಕ್ತಿಗಳು ಯಾವುದೇ ಗುರಿಯಿಲ್ಲದೆ ಕೆಲಸ ಮಾಡುತ್ತ ಹಣದ ಬದಲು ಅಷ್ಟೇ ಅಥವಾ ಅದಕ್ಕಿಂತಲೂ ಕಡಿಮೆ ಕೆಲಸ ಮಾಡುವುದರಲ್ಲಿ ವಿಶ್ವಾಸ ಇರಿಸುತ್ತಿದ್ದರು. ಹೆಚ್ಚು ಕೆಲಸದ ಸಂದರ್ಭ ಬಂದಾಗ ಅದರಿಂದ ಬರುವ ಲಾಭವನ್ನು ಕಲ್ಪನಾಶಕ್ತಿಯಿಂದ ಲೆಕ್ಕಿಸಿ, ಅದಕ್ಕನುಗುಣವಾಗಿ ಕೆಲಸ ಮಾಡುತ್ತಿದ್ದರು. ಲಾಭ ಸಿಗುವಂತಿದ್ದರೇ ಕೈ ಹಾಕುತ್ತಿದ್ದರು. ಇಲ್ಲದಿದ್ದರೆ ಅಷ್ಟಕ್ಕೇ ನಿಲ್ಲಿಸಿಬಿಡುತ್ತಿದ್ದರು.

ಪ್ರಾಮಾಣಿಕತೆ, ಪರಿಶ್ರಮ ಮೊದಲಾದ ಗುಣಗಳನ್ನು ನಾವು ಇತರರಲ್ಲಿ ಬಯಸುತ್ತೇವೆ. ಹಾಗಿರುವಾಗ ಅವು ನಮ್ಮಲ್ಲೂ ಇರಬೇಕಾದುದು ಅಗತ್ಯವಲ್ಲವೇ? ಕಾಲ ಬದಲಾಗಿದೆ. ಪ್ರಾಮಾಣಿಕತೆಗೆ ಬೆಲೆಯಿಲ್ಲ ಎಂದೆಲ್ಲ ಹೇಳಿದರೆ ಸಾಲದು. ಈಗಲೂ ಅಂತಹ ಒಳ್ಳೇ ಜನರು ಸಾಕಷ್ಟಿದ್ದಾರೆ.

**ಪರಿಶ್ರಮದ ಬೆಲೆ**

ನನಗೊಬ್ಬ ಸಂಗಾತಿಯ ನೆನಪಾಗುತ್ತಿದೆ. ಆತ ಎಂ.ಎ., ಪಾಸಾಗಿ ಒಂದು ವರ್ಕ್‌ಶಾಪ್‌ನಲ್ಲಿ ಗುಮಾಸ್ತನಾಗಿದ್ದ. ಅಲ್ಲಿಯೇ ಒಂದು ಪತ್ರಿಕೆ ಹೊರಡಿಸಲು ಯೋಚಿಸಿದ. ಆಸಕ್ತಿಗೆ ಕೊರತೆಯಿರಲಿಲ್ಲ; ಲೇಖನಗಳನ್ನು ಒಟ್ಟುಗೂಡಿಸಿದ. ಅವನ್ನು ಒಳ್ಳೇ ಬರಹದಲ್ಲಿ ಬರೆದು ಪತ್ರಿಕೆ ಹೊರಡಿಸಿದ; ಅದಕ್ಕೆ ಸುಂದರವಾದೊಂದು ಮುಖಪುಟವನ್ನು ಅಳವಡಿಸಿ ಮ್ಯಾನೇಜರ್ ಮುಂದಿಟ್ಟ. ಆತ ತುಂಬ ಪ್ರಸನ್ನನಾದ. ಅದೇ ವೇಳೆ ಸಂಯೋಗವಶಾತ್ ಮಂತ್ರಿಗಳೂ ಅಲ್ಲಿಗೆ ಬಂದರು. ಅವರಿಗೂ ಅದು ಮೆಚ್ಚಿಕೆಯಾಯಿತು. ಅವರು ಆ ಪತ್ರಿಕೆಯನ್ನೇ ಮುದ್ರಣರೂಪದಲ್ಲಿ ಪ್ರಕಟಿಸಲು ಆಜ್ಞಾಪಿಸಿದರು. ಈ ರೀತಿ ಹೊಸ ಮಾಸಪತ್ರಿಕೆಯೊಂದು ಹೊರಟಿತು. ಈ ಗುಮಾಸ್ತ ಅದರ ಸಂಪಾದಕನಾದ. ವೇತನ ಐದರಷ್ಟು ಹೆಚ್ಚಿತು. ಏನೊಂದೂ ಪ್ರತಿಫಲದ ಆಸೆಯಿಲ್ಲದ ಮಾಡಲಾದ ಕೆಲಸ ಎಷ್ಟೊಂದು ಒಳ್ಳೇ ಪರಿಣಾಮ ತಂದುಕೊಟ್ಟಿತು! ಅವನ ಪ್ರಗತಿಯ ಮಾರ್ಗವೂ ತೆರೆಯಿತು. ಆತ ಪಿ.ಎಚ್‌ಡಿ. ಮುಗಿಸಿ ಪ್ರಸಿದ್ಧ ಕಾಲೇಜೊಂದರ ಪ್ರಿನ್ಸಿಪಾಲನಾದ.

ನಮ್ಮ ಆಫೀಸಿನ ಒಬ್ಬ ಗುಮಾಸ್ತ ಶಾರ್ಟ್‌ಹ್ಯಾಂಡ್ ಕಲಿತಿದ್ದ. ಎಲ್ಲಿಯೂ ಜಾಗ ಸಿಗದುದರಿಂದ ಅದರ ಉಪಯೋಗ ಆಗಿರಲಿಲ್ಲ. ಆತ ನನಗೇ ಅದರ ಉಪಯೋಗ ಕೊಡುತ್ತಿದ್ದ. ನಾನು ಮನಸ್ಸಿಲ್ಲದ



ಮನಸ್ಸಿನಿಂದ ಅವನನ್ನು ಬಳಸಿಕೊಳ್ಳುತ್ತಿದ್ದೆ. ಏಕೆಂದರೆ ನಮ್ಮಲ್ಲಿ ಶಾರ್ಟ್‌ಹ್ಯಾಂಡ್ ಬೇಕಿರಲಿಲ್ಲ. ಆ ಸಂಬಳವನ್ನು ಕೊಡುತ್ತಿರಲಿಲ್ಲ. ಅವನ ಉತ್ಸಾಹ ನೋಡಿ ಮೆಲ್ಲ ಮೆಲ್ಲನೆ ನಾನು ಹೆಚ್ಚು ಹೆಚ್ಚು ಕೆಲಸ ಮಾಡಿಸತೊಡಗಿದೆ. ಸಂಗಾತಿಗಳೆಲ್ಲ ಅವನನ್ನು ಗೇಲಿ ಮಾಡಿದರು. 'ಪುಕ್ಕಟೆಯಾಗಿ ದುಡಿಯುತ್ತೀಯಲ್ಲಾ, ಗೂಬೆ' ಎಂದರು. ಆದರೆ ಆತ ಯಾವುದನ್ನೂ ಲಕ್ಷಿಸಲಿಲ್ಲ. ಕೆಲಕಾಲದ ಬಳಿಕ ನನ್ನ ಮಿತ್ರರೊಬ್ಬರು ನನ್ನಲ್ಲಿಗೆ ಬಂದರು. ಅವರಿಗೆ ಶಾರ್ಟ್‌ಹ್ಯಾಂಡಿನಲ್ಲಿ ನಿಪುಣನಾದ ಯೋಗ್ಯ ಮನುಷ್ಯನೊಬ್ಬ ಬೇಕಿದ್ದ. ನಾನು ನನ್ನ ಗುಮಾಸ್ತನ ಬಗ್ಗೆ ಹೇಳಿದೆ. ಇಷ್ಟು ದಿನ ಅಭ್ಯಾಸ ಮಾಡಿದ್ದುದರಿಂದ ಅವನಿಗೆ ಅನುಕೂಲವೇ ಆಯಿತು. ಮಿತ್ರರು ಅವನನ್ನು ಕರೆದೊಯ್ದರು. ಇಂದು ಅವನು ಆ ಸಂಸ್ಥೆಯ ಅತಿಮಹತ್ವದ ಹುದ್ದೆಯಲ್ಲಿದ್ದಾನೆ. ತನ್ನ ಕೆಲಸವನ್ನಷ್ಟೇ ಮಾಡಿ ತೆಪ್ಪಗೆ ಇರುತ್ತಿದ್ದರೆ ಅವನಿಗೆ ಈ ಸುಸಂದರ್ಭ ಒದಗುತ್ತಲೇ ಇರಲಿಲ್ಲ.

ದಿನಾಲೂ ನಮಗೆ ಹಲವಾರು ಜನರ ಸಂಪರ್ಕ ಉಂಟಾಗುತ್ತದೆ. ಒಬ್ಬ ನಮ್ಮ ತೋಟದ ಕೆಲಸ ಮಾಡಲು ಬಂದರೆ; ಇನ್ನೊಬ್ಬ ಪಾತ್ರೆ ತೊಳೆಯಲು ಬರುತ್ತಾನೆ. ತೋಟವನ್ನು ಓರಣಗೊಳಿಸಿ, ಅದರ ಕಸವನ್ನು ಹೊರತೆಗೆಯಲು ಹೇಳಿದರೆ ಮಾಲಿ (ತೋಟದ ಕೆಲಸಗಾರ) ಅದಕ್ಕೊಪ್ಪಲಾರ. ಅದು ತನ್ನ ಕೆಲಸವಲ್ಲವೆಂದು ನಿರ್ದಾಕ್ಷಿಣ್ಯವಾಗಿ ನುಡಿಯುವ. ಎಂದಾದರೂ ಅತಿಥಿಗಳು ಬಂದಾಗ ತೊಳೆಯುವ ಪಾತ್ರೆಗಳು ಹೆಚ್ಚಾದರೆ ಕೆಲಸಗಾರ ಸಿಡಿಮಿಡಿಗೊಳ್ಳುವ. ವಾಸ್ತವವಾಗಿ, ಕೆಲಸಗಾರರು ಒಂದಿಷ್ಟು ಹೆಚ್ಚು ಕೆಲಸವನ್ನು ತಾಳ್ಮೆಯಿಂದ ಮಾಡಿದರೆ ನಿಮಗೆ ಅವರ ಬಗ್ಗೆ ಅಭಿಮಾನವುಂಟಾಗಿ ಮುಂದೆ ಉತ್ತಮ ಅವಕಾಶ ಸಿಕ್ಕಾಗ ಅವರಿಗೆ ಸಹಾಯ ಮಾಡಲು ಸ್ವತಃ ಮುಂದಾಗುವಿರಿ. ಅವರು ಸ್ವತಃ ಕೆಲಸಗಳ್ಳರಾದರೆ ನೀವೇ ಅಂತಹವರನ್ನು ತೆಗೆದು ಬೇರಾರನ್ನಾದರೂ ನೇಮಿಸಿಕೊಳ್ಳಲು ಯೋಚಿಸುವಿರಿ.

ಪ್ರಪಂಚದಲ್ಲಿ ಶೇ. 95ರಷ್ಟು ಜನ ಕಡಿಮೆ ಕೆಲಸ ಮಾಡುವ ಮನೋಭಾವದವರು ಎಂತಲೇ ಉಳಿದ ಶೇ. 5ರಷ್ಟು ಜನರಿಗೆ ವಿಶೇಷ ಅವಕಾಶ ದೊರೆಯುತ್ತದೆ. ಅವರ ಮಾಲಿಕರೇ ಭಡ್ತಿ ನೀಡದೆ ಹೋದರೆ ಬೇರೆಯವರು ಅವನನ್ನು ಕರೆದೊಯ್ಯುತ್ತಾರೆ. ನಾವು ಪಡೆಯುವ ಸಂಬಳಕ್ಕಿಂತ ಹೆಚ್ಚು ಕೆಲಸ ಮಾಡಿದಾಗ ನಮಗೆ ಆತ್ಮತೃಪ್ತಿ ಉಂಟಾಗುತ್ತದೆ. ಅದರಿಂದ ಮಾನಸಿಕ ಶಾಂತಿ ದೊರೆಯುತ್ತದೆ. ಶಾಂತ ಮೆದುಳಿನಿಂದ ನಾವು ಇನ್ನೂ ಹೆಚ್ಚು ಕೆಲಸ ಮಾಡಬಲ್ಲೆವು.

ಯಾವುದೇ ಕೆಲಸ ಮಾಡಿದಾಗ ನಮಗೆ ಇಮ್ಮಡಿ ಲಾಭ ಸಿಗುತ್ತದೆ. ಮೊದಲನೆಯದಾಗಿ ಧನಪ್ರಾಪ್ತಿ. ಎರಡನೆಯದಾಗಿ ನಮ್ಮ ಪ್ರತಿಭೆಯ ವಿಕಾಸ. ಇದು ಸ್ಥಾಯೀ ಲಾಭವಾದುದರಿಂದ ಉದ್ಯೋಗ ತಪ್ಪಿದರೂ ನಾವು ಅನುಭವದಿಂದಲೇ ನಮ್ಮ ಕೆಲಸ ಮಾಡಿಕೊಳ್ಳಬಹುದು. ನೌಕರಿಯನ್ನೂ ನಮ್ಮಿಂದ ಕಸಿದುಕೊಳ್ಳಬಹುದು. ಆದರೆ ಕಲೆಯನ್ನು ಪ್ರತಿಭೆಯನ್ನು ಕಸಿಯಲು ಸಾಧ್ಯವಿಲ್ಲ.

ಪ್ರಪಂಚದಲ್ಲಿ ಮೂರು ರೀತಿಯ ಜನರಿದ್ದಾರೆ. ಮೊದಲನೆಯವರು ತಾವೇ ಕೆಲಸ ಮಾಡುತ್ತಾರೆ. ಇತರರ ಹೇಳಿಕೆಗಾಗಿ ಕಾಯುವುದಿಲ್ಲ. ಇಂತಹವರಿಗೆ ಮಾನ-ಮರ್ಯಾದೆ ಹಾಗೂ ಸಂಪತ್ತು ಸಾಕಷ್ಟು ಸಿಗುತ್ತದೆ.

ಎರಡನೇ ರೀತಿಯ ಜನ ಆಜ್ಞಾಪಾಲನೆಯನ್ನಷ್ಟೇ ಬಲ್ಲರು. ಅವರಿಗೆ ಸ್ವತಃ ಏನೂ ಹೊಳೆಯುವುದಿಲ್ಲ. ಇಂತಹವನಿಗೆ ಹಣವೇನೋ ಸಿಕ್ಕರೂ ಮರ್ಯಾದೆ ಸಿಗುವುದಿಲ್ಲ. ಮೂರನೇ ರೀತಿಯ ಜನ ನಿರುಪಾಯತೆ ಹಾಗೂ ಒತ್ತಾಯದಿಂದಷ್ಟೇ ಕೆಲಸ ಮಾಡುತ್ತಾರೆ. ಇವರಿಗೆ ಹಣವೂ ಕಡಿಮೆ ಸಿಗುತ್ತದೆ. ಮರ್ಯಾದೆಯ ಪ್ರಶ್ನೆಯೇ ಇಲ್ಲ.

ಹೆಚ್ಚು ದುಡಿಯುವ ಅಭ್ಯಾಸ ಹಾಕಿಕೊಂಡಾಗ ಸಫಲತೆಯ ಬುನಾದಿ ಭದ್ರವಾಗುತ್ತದೆ. ಇದರಿಂದ ವಿಚಾರಧಾರೆ ಸಕಾರಾತ್ಮಕವಾಗುತ್ತದೆ. ಆ ಬಳಿಕ ಉಳಿದ ಗುಣಗಳು ತಾವಾಗಿಯೇ ಬಂದು ಸೇರುತ್ತವೆ. ಹೆಚ್ಚಿದ ಸೇವೆಗೆ ಪ್ರತಿಫಲವೇ ಇಲ್ಲವೆಂದು ಹೇಳಲಾಗುವುದಿಲ್ಲ. ಪ್ರತಿಯೊಂದು ಕ್ರಿಯೆಗೆ ಪ್ರತಿಕ್ರಿಯೆ ಇದ್ದೇ ಇದೆ. ಇದು ಪ್ರಕೃತಿ ನಿಯಮ. ಕೆಲವೊಮ್ಮೆ ನೇರ ದಾರಿಯಿಂದ ಫಲ ಬಂದರೆ; ಕೆಲವೊಮ್ಮೆ ಬಳಸು ಹಾದಿಯಿಂದ ಬರಬಹುದು. ಕೆಲಸಕ್ಕೆ ತಕ್ಷಣ ಫಲ ದೊರೆತರೆ ಪ್ರಯತ್ನ ಅಲ್ಲಿಗೇ ಮುಗಿಯುತ್ತದೆ. ಮತ್ತೆ ಪ್ರಗತಿಗೆ ಅವಕಾಶ ಇರುವುದಿಲ್ಲ.

ಪತ್ರಿಕಾ ಸಂಪಾದಕರೊಬ್ಬರು ಒಂದು ಕಾಲೇಜಿಗೆ ಭಾಷಣ ಕೊಡಲು ಬಂದರು. ಅವರ ಗೌರವಧನ ನಿಶ್ಚಿತವಾಗಿತ್ತು. ಅಲ್ಲಿ ಹೋಗಿ ಅವರು ಆ ಕಾಲೇಜಿನ ಚಟುವಟಿಕೆ ಕಂಡರು. ಅವರಿಗೆ ತುಂಬಾ ತೃಪ್ತಿಯಾಯಿತು. ಅವರ ಭಾಷಣವೂ ಪ್ರಭಾವಶಾಲಿಯಾಗಿತ್ತು. ವಿದ್ಯಾರ್ಥಿ ಹಾಗೂ ಶಿಕ್ಷಕರ ವರ್ಗದವರಿಗೆ ತುಂಬಾ ಹಿಡಿಸಿತು. ಅವರಿಗೆ ಗೌರವಧನದ ಚೆಕ್ ಕೊಟ್ಟಾಗ ಅವರು ಸ್ವೀಕರಿಸಲ್ಲಿಲ. "ಇಲ್ಲಿ ನಾನು ಬಂದು ಸಾಕಷ್ಟು ಕಲಿತಿದ್ದೇನೆ. ಇಲ್ಲಿಯ ಕಾರ್ಯ-ಕಲಾಪ ಕಂಡು ಹಿಗ್ಗಿದ್ದೇನೆ. ಅದರ ಬೆಲೆ ಈ ಚೆಕ್ಕಿಗಿಂತ ಎಷ್ಟೋ ಮೇಲು, ಹೀಗಾಗಿ ನನಗೆ ಇದರ ಗೌರವಧನ ಸಿಕ್ಕಿಬಿಟ್ಟಿದೆ" - ಎಂದರವರು. ಅವರ ಈ ಉದಾರ ವ್ಯವಹಾರ ಎಲ್ಲರ ಮೇಲೂ ತುಂಬ ಪ್ರಭಾವ ಬೀರಿತು. ಅವರೊಂದು ಆತ್ಮೋನ್ನತಿಗೆ ಸಂಬಂಧಪಟ್ಟ ಪತ್ರಿಕೆ ಪ್ರಕಟಿಸುತ್ತಿದ್ದಾರೆಂದು ಪ್ರಿನ್ಸಿಪಾಲ್ ನುಡಿದಾಗ, ವಿದ್ಯಾರ್ಥಿಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಅದರ ಚಂದಾದಾರರಾದರು. ಹೀಗೆ ಅವರಿಗೆ ಬಹಳಷ್ಟು ಲಾಭವಾಯಿತು.

ನಾವು ನಮ್ಮ ಯಾವುದೇ ಕೆಲಸದ ಲಾಭವನ್ನು ವಿಶ್ಲೇಷಿಸಿದರೆ, ಅದರ ಮೂಲದಲ್ಲಿ ಯಾವುದೋ ಒಳ್ಳೇ ಕೆಲಸ ಅಡಗಿದೆಯೆಂಬುದನ್ನು ಮನಗಾಣುತ್ತೇವೆ. ಆ ವೇಳೆ ನಾವು ಯಾವುದೇ ಪ್ರತಿಫಲದ ಆಸೆಯಿಲ್ಲದೆ ಇದನ್ನು ಮಾಡಿದ್ದೆವು. ಆ ಬೀಜವೇ ಹೆಮ್ಮರವಾಗಿ ಬೆಳೆದು ಈಗ ಫಲ ಕೊಡುತ್ತಲಿದೆ. ನಾವು ಕೊಟ್ಟಷ್ಟನ್ನು ಖಂಡಿತ ಪಡೆಯುವೆವು. ಇದು ನಿಸರ್ಗ ನಿಯಮ.

ಪ್ರತಿಯೊಬ್ಬನೂ ಸ್ವಾರ್ಥಿಯೇ. ಜೀವನದ ಸಂಗ್ರಾಮದಲ್ಲಿ ಜಯಗಳಿಸಲು ಇದು ಅಗತ್ಯವೂ ಹೌದು. ಆದರೆ ಮಿತಿ ಮೀರಿದರೆ ಅದು ಹಾನಿಕರ. ಆದ್ದರಿಂದ ನಿಮ್ಮ ಮಾಲಿಕ ಸ್ವಾರ್ಥಿಯಾಗಿದ್ದರೆ ಅದೇನೂ ಆಶ್ಚರ್ಯದ ಸಂಗತಿಯಲ್ಲ. ನೀವು ಅವನಿಗೆ ಸ್ವತಃ ನೆರವು ನೀಡಿರಿ. ನಿಮ್ಮ ಕೆಲಸ ಅನಿವಾರ್ಯವಾಗುವಂತೆ ಮಾಡಿಕೊಳ್ಳಿರಿ. ಆಗ ಅವನು ನಿಮ್ಮನ್ನು ನೇಮಿಸಿಕೊಂಡು ಅದಕ್ಕೆ ತಕ್ಕ ಪ್ರತಿಫಲ ನೀಡುತ್ತಾನೆ. ಮುಂದೆ ನೀವು ನಿಮ್ಮ ವೇತನವನ್ನು ನಿಶ್ಚಿತಗೊಳಿಸುವ ಸ್ಥಿತಿಗೆ ತಲುಪುವಿರಿ.

ಯಾವುದೇ ಕ್ಷೇತ್ರದಲ್ಲಾದರೂ ಸಾಫಲ್ಯ ಪಡೆಯಲು ಲಕ್ಷ್ಯ, ನಿರ್ಧಾರ, ಆತ್ಮವಿಶ್ವಾಸ, ಆತ್ಮನಿಯಂತ್ರಣ, ನೇತೃತ್ವಶಕ್ತಿ, ಆಕರ್ಷಕ ವ್ಯಕ್ತಿತ್ವ, ಸಕಾರಾತ್ಮಕ ವಿಚಾರಧಾರೆ, ಸಹನಶೀಲತೆ, ಆಸಕ್ತಿ, ಉದಾರ ಮನೋವೃತ್ತಿ, ಸಮಯ ಹಾಗೂ ಧನದ ಉಳಿತಾಯದ ಮನೋಭಾವ, ಕಲ್ಪನಾಶಕ್ತಿ, ಉತ್ಸಾಹ, ಸಹಕಾರ ಮೊದಲಾದ ಹಲವಾರು ಗುಣಗಳು ಅಗತ್ಯ. ಇವುಗಳ ಜೊತೆಗೆ ಪ್ರತಿಫಲದ ಆಸೆಯಿಲ್ಲದೆ ಉತ್ತಮ ರೀತಿಯಿಂದ ಕೆಲಸ ಮಾಡುವ ಒಂದು ಗುಣ ಸೇರಿಕೊಂಡರೆ ಉಳಿದೆಲ್ಲವೂ ತಾವಾಗಿಯೇ ಬಂದು ಸೇರುವವು. ಹೀಗಾಗಿ ನಾವು ಈಗಿನಿಂದಲೇ ಇಂಥ ಗುಣವನ್ನು ವೃದ್ಧಿಪಡಿಸಿಕೊಳ್ಳೋಣ. ನಾವು ಒಂದೇ ತಿಂಗಳೊಳಗೆ ಬದಲಾದ ವ್ಯಕ್ತಿ ಎನಿಸುವೆವು. ಆಗ ನಮ್ಮ ಪ್ರಗತಿಯನ್ನು ಯಾರೂ ತಡೆಯಲಾರರು.

●



# ಕರುಣಾಮಯಿ ಯೇಸು

-- ಡಾ. ಮಹಾಂತೇಶ ಮಲ್ಲನಗೌಡರ,

ಜಗತ್ತಿನ ಪ್ರಮುಖ ಧರ್ಮಗಳಲ್ಲಿ ಒಂದಾದ ಕ್ರಿಶ್ಚಿಯನ್ ಸಂಸ್ಥಾಪಕನಾದ ಏಸುಕ್ರಿಸ್ತನ ಜನ್ಮದಿನವನ್ನು ಪ್ರತಿವರ್ಷ ಡಿಸೆಂಬರ್ 25ರಂದು ಜಗತ್ತಿನಾದ್ಯಂತ ಸಂಭ್ರಮ, ಸಡಗರದಿಂದ ಆಚರಿಸಲಾಗುತ್ತದೆ. ಶಾಂತಿಯ ಹರಿಕಾರನಾದ, ಅಹಿಂಸೆಯ ಸಾಕಾರ ಮೂರ್ತಿಯಾದ ಏಸುಕ್ರಿಸ್ತನ ಜೀವನವನ್ನು ಅರ್ಥೈಸಿಕೊಳ್ಳಲು ನಮಗಿರುವ ಪ್ರಮುಖ ಆಧಾರಗಳೆಂದರೆ ಹೊಸ ಒಡಂಬಡಿಕೆಯ 'ಮತ್ತಾಯ' , 'ಮಾರ್ಕ್', 'ಲೂಕ' ಹಾಗೂ 'ಯೋಹಾನ'ನು ಬರೆದ ಸುವಾರ್ತೆಗಳು.

ಏಸುಕ್ರಿಸ್ತನು, ಯೋಸೆಫ್ ಹಾಗೂ ಮರಿಯಾಳ ಮಗನಾಗಿ ಹುಟ್ಟಿದನು. ಆದರೆ, ಏಸುಕ್ರಿಸ್ತನ ಜನನವು ಸಾಮಾನ್ಯ ಮಗುವಿನ ಹಾಗೆ ಆಗದೆ, ದೈವತ್ವದಿಂದ ಕೂಡಿದೆ. ಯೋಸೆಫ್‌ನಿಗೆ ಮರಿಯಾಳನ್ನು ನಿಶ್ಚಯ ಮಾಡಲಾಗಿತ್ತು. ಆದರೆ, ಅವರು ಕೂಡುವುದಕ್ಕಿಂತ ಮುಂಚೆಯೇ ಮರಿಯಾಳು ಪವಿತ್ರಾತ್ಮನಿಂದ ಗರ್ಭವತಿಯಾಗಿದ್ದುದು ತಿಳಿದು ಬಂತು. ಗಂಡನಾದ ಯೂಸೀಪನು ಸಜ್ಜನನಾಗಿದ್ದು ಆಕೆಯನ್ನು ಬಿಟ್ಟುಬಿಡಬೇಕೆಂದಿದ್ದನು. ಆದರೆ ಕರ್ತನ ದೂತನು ಅವನಿಗೆ ಕನಸಿನಲ್ಲಿ ಕಾಣಿಸಿಕೊಂಡು "ಎಲೈ ಯೋಸೆಫ್‌ನೇ, ದಾವಿದನ ವಂಶದವನೇ, ನಿನ್ನ ಹೆಂಡತಿಯಾದ ಮರಿಯಳನ್ನು ಸೇರಿಸಿಕೊಳ್ಳುವುದಕ್ಕೆ ಅಂಜಬೇಡ, ಆಕೆಯ ಗರ್ಭವು ಪವಿತ್ರಾತ್ಮದಿಂದಲೇ ಆದದ್ದು. ಆಕೆಯು ಒಬ್ಬ ಮಗನನ್ನು ಹಡೆಯುವಳು, ನೀನು ಆತನಿಗೆ 'ಏಸು' ಎಂದು ಹೆಸರಿಡಬೇಕು. ಯಾಕೆಂದರೆ ಆತನೆ ತನ್ನ ಜನರನ್ನು ಪಾಪಗಳಿಂದ ಬಿಡಿಸಿ ಕಾಯುವನು" ಎಂದು ಹೇಳಿದನು. ಆಗ ಯೋಸೆಫ್‌ನು ನಿದ್ದೆಯಿಂದ ಎಚ್ಚರವಾಗಿ ಕರ್ತನ ದೂತನು ಅಪ್ಪಣೆ ಕೊಟ್ಟ ಹಾಗೆ ತನ್ನ ಹೆಂಡತಿಯನ್ನು ನೋಡಿಕೊಂಡನು. ಹುಟ್ಟಿದ ಮಗುವಿಗೆ ಏಸು ಎಂದು ಹೆಸರಿಟ್ಟರು.

ಬೆತ್ಲೆಹೆಮ್ ಎಂಬ ಊರಲ್ಲಿ ಏಸು ಹುಟ್ಟಿದಾಗ ಮೂಢಣ ದೇಶದ ಜೋಯಿಸರು, ಯೆರೊಸೆಲೆಮ್‌ಗೆ ಬಂದು ಯೆಹುದ್ದೆರ ಅರಸನಾಗಿ ಹುಟ್ಟಿದವನು ಎಲ್ಲಿದ್ದಾನೆ? ಆತನನ್ನು ಸೂಚಿಸುವ ನಕ್ಷತ್ರವನ್ನು ನಾವು ಮೂಢಣ ದೇಶದಲ್ಲಿ ಕಂಡು ಆತನಿಗೆ ಅಡ್ಡ ಬೀಳಲಿಕ್ಕೆ ಬಂದವೆ ಅಂದರು. ಇದನ್ನು ಕೇಳಿ ಅರಸನಾದ ಹೋರೋದ ಕಳವಳಪಟ್ಟನು. ಜೋಯಿಸರು, ಮೂಢಣ ದೇಶದಲ್ಲಿ ಕಂಡ ನಕ್ಷತ್ರವು ಅವರ ಮುಂದೆ ನಡೆದು ಕೂಸು ಇದ್ದ ಸ್ಥಳದ ಮೇಲೆ ಬಂದು ನಿಂತಿತು. ಅವರು ನಕ್ಷತ್ರವನ್ನು ಕಂಡು ಅತ್ಯಂತ ಸಂತೋಷಪಟ್ಟರು. ಮತ್ತು ಆ ಮನೆಯೊಳಕ್ಕೆ ಹೋಗಿ ಆ ಕೂಸನ್ನು ತಾಯಿಯಾದ ಮರಿಯಳ ಬಳಿಯಲ್ಲಿ ಕಂಡು ಅದಕ್ಕೆ ನಮಸ್ಕಾರ ಮಾಡಿ, ತಮ್ಮ ಗಂಟುಗಳನ್ನು ಬಿಚ್ಚಿ ಅದಕ್ಕೆ ಚಿನ್ನ, ಧೂಪ, ರಕ್ತ ಬೋಳಗಳನ್ನು ಕಾಣಿಕೆಯಾಗಿ ಕೊಟ್ಟರು ಆಮೇಲೆ ದೇವರು ಕನಸಿನಲ್ಲಿ ಅವರಿಗೆ ಹೋರೋದನ ಬಳಿಗೆ ತಿರುಗಿ ಹೋಗಬಾರದೆಂದು ಅಪ್ಪಣೆ ಕೊಟ್ಟಿದ್ದರಿಂದ ಮತ್ತೊಂದು ದಾರಿಯಿಂದ ತಮ್ಮ ದೇಶಕ್ಕೆ ಹೊರಟು ಹೋದರು.

ಅವರು ಹೋದ ಮೇಲೆ ಕರ್ತನ ದೂತನು ಯೋಸೆಫ್‌ನಿಗೆ ಕನಸಿನಲ್ಲಿ ಕಾಣಿಸಿಕೊಂಡು, "ನೀನು ಈ ಕೂಸನ್ನು, ಇದರ ತಾಯಿಯನ್ನು ಕರೆದುಕೊಂಡು ಐಗುಪ್ತ ದೇಶಕ್ಕೆ ಓಡಿಹೋಗಿ ನಾನು ನಿನಗೆ

ಹೇಳುವತನಕ ಅಲ್ಲೇ ಇರು; ಹೇರೋದನು ಈ ಕೂಸನ್ನು ಕೊಲ್ಲಬೇಕೆಂದು ಅದನ್ನು ಹುಡುಕುತ್ತಿರುವನು" ಅಂದನು. ಅದೇ ರೀತಿಯಾಗಿ ಯೋಸೆಫ್‌ನು ಕೂಸನ್ನೂ, ಅದರ ತಾಯಿಯನ್ನೂ ರಾತ್ರಿ ವೇಳೆಯಲ್ಲಿ ಕರೆದುಕೊಂಡು ಐಗುಪ್ತ ದೇಶಕ್ಕೆ ಹೊರಟುಹೋಗಿ, ಹೇರೋದನು ತೀರಿ ಹೋಗುವತನಕ ಅಲ್ಲಿಯೇ ಇದ್ದನು.

ಹೇರೋದನು ತೀರಿ ಹೋದ ಮೇಲೆ, ಕರ್ತನ ದೂತನ ಮಾತಿನಂತೆ ಇಸ್ರಾಯಿಲ್ ದೇಶಕ್ಕೆ ಬಂದನು. ಆದರೆ, ಆರ್ಖೆಲಾಯನು ಆ ಪ್ರದೇಶವನ್ನು ಆಳುತ್ತಾನೆಂದು ಕೇಳಿ ಅಲ್ಲಿಗೆ ಹೋಗುವುದಕ್ಕೆ ಅಂಜಿದನು. ದೇವರ ಅಪ್ಪಣೆಯಂತೆ ಗಲಿಲಾಯ ಸೀಮೆಗೆ ಹೋದನು. ಮತ್ತು ನಜರೇತ್ ಎಂಬ ಊರಿಗೆ ಬಂದು ಅಲ್ಲಿ ಮನೆ ಮಾಡಿಕೊಂಡು ಇದ್ದನು. ಇದರಿಂದ ನಜರಾಯ ಎಂಬ ಹೆಸರು ಆತನಿಗೆ ಬಂದಿತು.

ಏಸು ಯೋಹಾನನಿಂದ ಸ್ನಾನ ಮಾಡಿಸಿಕೊಳ್ಳಬೇಕೆಂದು ಗಲಿಲಾಯದಿಂದ ಯೋರ್ದನ್ ಹೊಳೆಗೆ ಬಂದನು. ಆಗ ಯೋಹಾನನು "ನಾನು ನಿನ್ನಿಂದ ಸ್ನಾನ ಮಾಡಿಸಿಕೊಳ್ಳ ತಕ್ಕವನಾಗಿರುವಲ್ಲಿ ನೀನು ನನ್ನ ಬಳಿಗೆ ಬರುವುದೇನು" ಎಂದು ಹೇಳಿ, ಆತನನ್ನು ತಡೆಯುತ್ತಿದ್ದನು. ಏಸುವಿನ ಒತ್ತಾಯದ ನಂತರ ಒಪ್ಪಿಕೊಂಡನು. ಏಸು ಸ್ನಾನ ಮಾಡಿಸಿಕೊಂಡು ನೀರಿನಿಂದ ಮೇಲಕ್ಕೆ ಬರಲು ಆತನಿಗೆ ಆಕಾಶವು ತೆರೆಯಿತು. ದೇವರ ಆತ್ಮ ಪಾರಿವಾಳದ ಹಾಗೆ ಇಳಿದು ತನ್ನ ಮೇಲೆ ಬರುವುದನ್ನು ಕಂಡನು. ಆಗ ಈತನು ಪ್ರಿಯನಾಗಿರುವ ನನ್ನ ಮಗನು ಈತನನ್ನು ನಾನು ಮೆಚ್ಚಿದ್ದೇನೆಂದು ಅಶರೀರವಾಣಿಯಾಯಿತು.

ಸಹಿತಾಸನು, ಆತನನ್ನು ಆಮಿಷಕ್ಕೆ ಒಡ್ಡಿ, ದಾರಿ ತಪ್ಪಿಸಲು ಪ್ರಯತ್ನಿಸಿದರೂ, ಅದು ಸಾಧ್ಯವಾಗಲಿಲ್ಲ. ಏಸು ಗಲಿಲಾಯ ಸೀಮೆಯಲ್ಲಿ ಸುವಾರ್ತೆಯನ್ನು ಸಾರುವುದಕ್ಕೆ ಪ್ರಾರಂಭ ಮಾಡಿದ. ಗಲಿಲಾಯ ಸಮುದ್ರದ ಬಳಿಯಲ್ಲಿ ತಿರುಗಾಡುತ್ತಿರುವಾಗ ಇಬ್ಬರು ಮೀನುಗಾರರನ್ನು ಕಂಡನು. ಅವರೆ ಅಣ್ಣ-ತಮ್ಮಂದಿರಾದ ಸೀಮೋನ ಮತ್ತು ಅಂದ್ರೆಯ. ಅವರಿಗೆ ಆತನು 'ನನ್ನ ಹಿಂಬೆ ಬನ್ನಿರಿ' ಮನುಷ್ಯರನ್ನು ಹಿಡಿಯುವ ಬೆಸ್ತರನ್ನಾಗಿ ನಿಮ್ಮನ್ನು ಮಾಡುವೆನು" ಎಂದು ಹೇಳುತ್ತಲೇ ಅವರು ತಮ್ಮ ಬಲೆಗಳನ್ನು ಬಿಟ್ಟು ಆತನ ಹಿಂದೆ ಹೋದರು. ಏಸು ಪ್ರಥಮ ಶಿಷ್ಯರನ್ನಾಗಿ ಅವರನ್ನು ಮಾಡಿಕೊಂಡನು. ಬಳಿಕ ಏಸು ಗಲಿಲಾಯದಲ್ಲೆಲ್ಲ ತಿರುಗಾಡಿ ಅಲ್ಲಿಯವರ ಸಭಾ ಮಂದಿರಗಳಲ್ಲಿ ಉಪದೇಶಗಳನ್ನು ಮಾಡುತ್ತಾ ಪರಲೋಕ ರಾಜ್ಯದ ಸುವಾರ್ತೆಯನ್ನು ಸಾರಿ ಹೇಳುತ್ತ ಜನರ ಎಲ್ಲ ತರಹದ ರೋಗಗಳನ್ನು, ಎಲ್ಲ ತರಹದ ಬೇನೆಗಳನ್ನು ವಾಸಿ ಮಾಡುತ್ತ ಬಂದನು. ಆತನ ತತ್ವಗಳಿಗೆ ಜನರು ಮನಸೋತು, ಹಿಂಬಾಲಕರಾಗಿ ಬರುತ್ತಿದ್ದರು. ಆತನು ಮಾಡಿದ ಹಲವಾರು ಪವಾಡಗಳು ಜನರನ್ನು ಮನಸೂರೆಗೊಂಡವು.

ಜನರರ ಗುಂಪುಗಳನ್ನು ನೋಡಿ ಆತನು ಜನರು "ಕುರುಬನಿಲ್ಲದ ಕುರಿಗಳ ಹಾಗೆ ತೊಳಲಿ, ಬಳಲಿ ಹೋಗಿದ್ದಾರಲ್ಲ" ಎಂದು ಅವರ ಮೇಲೆ ಕನಿಕರಪಟ್ಟನು. "ಬೆಳೆಯು ಬಹಳ, ಕೆಲಸದವರು ಸ್ವಲ್ಪ", ಆದುದರಿಂದ ಬೆಳೆಯ ಯಜಮಾನನನ್ನು ನಿನ್ನ ಬೆಳೆಗೆ ಕೆಲಸದವವನ್ನು ಕಳಿಸಬೇಕೆಂದು ಬೇಡಿಕೊಳ್ಳಿರಿ ಎಂದು ಹೇಳಿದನು. ತನ್ನ ಹನ್ನೆರಡು ಮಂದಿ ಶಿಷ್ಯರನ್ನು ಕರೆದು ಅವರಿಗೆ ಎಲ್ಲ ಅಧಿಕಾರ ಕೊಟ್ಟು ಕಳುಹಿಸಿದನು. ಏಸುವಿನ ತತ್ವಗಳಿಗೆ ಮಾರು ಹೋದ ಜನರು ಆತನನ್ನು ಅತಿಯಾಗಿ ಆರಾಧಿಸಹತ್ತಿದರು. ಆತನ ಮೇಲಿನ ಜನರ ಪ್ರೀತಿ ಅಧಿಕಾರಸ್ಥರನ್ನು ಆತಂಕ್ಕೆ ಈಡುಮಾಡಿತು. ಏಸುವನ್ನು ಕೊಲ್ಲಬೇಕೆಂದು ಸಂಚು ಮಾಡಿತೊಡಗಿದರು. ಹನ್ನೆರಡು ಮಂದಿ ಶಿಷ್ಯರಲ್ಲಿ ಒಬ್ಬನಾದ "ಇಸ್ಕರಿಯೋತ"ಯೂದನೆಂಬುವನು ಹಣದ ಆಸೆಗಾಗಿ ಹಿಡಿದುಕೊಡಲು ಸಂಚು ಮಾಡಿದನು. ಈ ಸಂಚು ದೇವದೂತನಾದ ಏಸುವಿಗೆ ತಿಳಿದೇ ಇತ್ತು.



ಒಂದು ದಿನ ಸಂಜೆಯಾದಾಗ ಆತನು ಹನ್ನೆರಡು ಮಂದಿ ಶಿಷ್ಯರ ಸಂಗಡ ಊಟಕ್ಕೆ ಕೂತುಕೊಂಡನು. ನಿಮ್ಮಲ್ಲಿ ಒಬ್ಬರು ನನ್ನನ್ನು ವೈರಿಗಳಿಗೆ ಹಿಡಿದುಕೊಡುವಿರಿ ಎಂದನು. ಹನ್ನೆರಡು ಜನ ಶಿಷ್ಯರು ತಾವಲ್ಲವಲ್ಲವೆಂದರು. ಅದಕ್ಕೆ ಏಸುವು "ಬಟ್ಟಲಲ್ಲಿ ನನ್ನ ಸಂಗಡ ಕೈ ಅದ್ದಿದವನೇ ನನ್ನನ್ನು ಹಿಡಿದುಕೊಡುವನು" ಎಂದನು. ಆಗ ಆತನನ್ನು ಹಿಡಿದುಕೊಡಬೇಕೆಂದಿದ್ದ ಯೂದನು "ಗುರುವೇ, ನಾನಲ್ಲವಲ್ಲ?" ಅನ್ನಲಾಗಿ ಏಸು ಅವನಿಗೆ "ನೀನೇ ಹೇಳಿದ್ದಿ" ಎಂದು ಹೇಳಿದನು.

ಅವರು ಊಟ ಮಾಡುತ್ತಿರುವಾಗ ಏಸು ರೊಟ್ಟಿಯನ್ನು ತೆಗೆದುಕೊಂಡು ದೇವರ ಸ್ತೋತ್ರ ಮಾಡಿ ಮುರಿದು ಶಿಷ್ಯರಿಗೆ ಕೊಟ್ಟು "ತಕ್ಕೊಳ್ಳಿರಿ, ತಿನ್ನಿರಿ ಇದು ನನ್ನ ದೇಹ" ಎಂದನು. ಆಮೇಲೆ ಪಾತ್ರೆಯನ್ನು ತೆಗೆದುಕೊಂಡು ಸ್ತೋತ್ರ ಮಾಡಿ ಅವರಿಗೆ ಕೊಟ್ಟು ಇದರಲ್ಲಿ ಇರುವುದನ್ನು ಎಲ್ಲರೂ ಕುಡಿಯಿರಿ, ಇದು ನನ್ನ ರಕ್ತ ಇದು ಒಡಂಬಡಿಕೆಯ ರಕ್ತ. ಇದು ಪಾಪಗಳ ಕ್ಷಮೆಗಾಗಿ ಬಹುಜನರಿಗೋಸ್ಕರ ಸುರಿಸಲ್ಪಡುವ ರಕ್ತ ಎಂದು ಹೇಳಿದನು.

ಬಳಿಕ ಅವರು ಕೀರ್ತನೆಯನ್ನು ಹಾಡಿ, ಎಣ್ಣೆಯ ಮರಗಳ ಗುಡ್ಡಕ್ಕೆ ಹೊರಟು ಹೋದರು.

ಏಸು ಪ್ರಾರ್ಥನೆಯನ್ನು ಮಾಡುತ್ತಿದ್ದಾಗ ಹನ್ನೆರಡು ಮಂದಿ ಶಿಷ್ಯರಲ್ಲಿ ಒಬ್ಬನಾದ ಯಾದನು ಬಂದನು. ಆತನ ಹಿಂದೆ ಏಸುಗಳ ವೈರಿಗಳ ಹಿಂಡೇ ಇತ್ತು. ಯೂದನು ಅವರಿಗೆ "ನಾನು ಯಾರಿಗೆ ಮುದ್ದಿಡುತ್ತೇನೋ ಅವನೇ ಆತನು, ಅವನನ್ನು ಹಿಡಿಯಿರಿ" ಎಂದು ಗುರುತು ಹೇಳಿಕೊಟ್ಟಿದ್ದ. ಅವನು ಏಸುವಿನ ಬಳಿ ಹೋಗಿ "ಗುರುವೇ ನಮಸ್ಕಾರ" ಎಂದು ಹೇಳಿ ಆತನಿಗೆ ಮುದ್ದಿಟ್ಟನು. ವೈರಿಗಳು ಏಸುವಿನ ಮೈಲೆ ಕೈಹಾಕಿ ಆತನನ್ನು ಹಿಡಿದರು.

ಸುಳ್ಳು ದೋಷಾರೂಪಣೆಗೆ ಗುರಿ ಮಾಡಿ ಏಸುವನ್ನು ಶಿಲುಬೆಗೇರಿಸಲು ತೀರ್ಮಾನಿಸಲಾಯಿತು. ದೇಶಾಧಿಪತಿಯ ಸಿಪಾಯಿಗಳು ಏಸುವನ್ನು ಅರಮನೆಯೊಳಕ್ಕೆ ಕರೆದುಕೊಂಡು ಹೋಗಿ ಆತನ ಬಟ್ಟೆಗಳನ್ನು ತೆಗೆದುಹಾಕಿ ಕೆಂಪು ಬಟ್ಟೆಯನ್ನು ಹೊದಿಸಿ ಮುಳ್ಳು ಬಳ್ಳಿಯಿಂದ ಕಿರೀಟವನ್ನು ಹೆಣೆದು, ಆತನ ತಲೆಯ ಮೇಲೆ ಇಟ್ಟರು. ಅಪಹಾಸ್ಯ ಮಾಡಿದರು. ಹೊರಕ್ಕೆ ಹೋಗುತ್ತಿರುವಾಗ ಕುರೇನೆ ಪಟ್ಟಣದ ಸೀಮೋನನೆಂಬುವನನ್ನು ಶಿಲುಬೆಯನ್ನು ಹೊರುವುದಕ್ಕೆ ಹಿಡಿದರು. ಗೊಲ್ಗೊಥಾ ಎಂದರೆ ಕಪಾಲಸ್ಥಳ ಎಂಬ ಸ್ಥಳಕ್ಕೆ ಬಂದಾಗ ಆತನಿಗೆ ಕಹಿ ಬೆರೆಸಿದ ದ್ರಾಕ್ಷಾ ರಸವನ್ನು ಕುಡಿಯುವುದಕ್ಕೆ ಕೊಟ್ಟರು. ಬಳಿಕ ಆತನನ್ನು ಶಿಲುಬೆಗೆ ಹಾಕಿ ಕಾಯುತ್ತಾ ಇದ್ದರು.

ಮಧ್ಯಾಹ್ನ ಹನ್ನೆರಡು ಗಂಟೆಯಿಂದ ಮೂರು ಗಂಟೆಯವರೆಗೆ. ಆ ದೇಶದ ಮೇಲೆಲ್ಲ ಕತ್ತಲೆ ಕವಿಯಿತು. ಸುಮಾರು ಮೂರು ಗಂಟೆಗೆ ಏಸುವು ಪ್ರಾಣ ಬಿಟ್ಟನು. ನಂತರ ಮತ್ತಾಯನು ಬರೆದ ಸುವಾರ್ತೆ ಅದನ್ನು ಈ ರೀತಿ ವರ್ಣಿಸುತ್ತದೆ. "ಆಗ ಇಗೋ ದೇವಾಲಯದ ತೆರೆಯು ಮೇಲಿಂದ ಕೆಳಗಿನವರೆಗೂ ಹರಿದು ಎರಡು ಭಾಗವಾಯಿತು, ಭೂಮಿಯು ಅದುರಿತು, ಬಂಡೆಗಳು ಸೀಳಿ ಹೋದವು, ಸಮಾಧಿಗಳು ತೆರೆದವು, ನಿದ್ದೆ ಹೋಗಿದ್ದ ಅನೇಕ ಭಕ್ತರ ದೇಹಗಳು ಎದ್ದವು".

ಸ್ಥಾಪನೆ : 1043
ಕೆ.ಎಸ್.ಟಿ. 73606285
ಸಿಎಸ್.ಟಿ 73656288 } ದಿ. 24.8.62

ತಂತಿ : 'ವೀರಶೈವ'
ಕೇಂದ್ರ ಕಛೇರಿ : 72866
70204
ಮಿನಿ ಬಜಾರ್ : 351114

## ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)
ಅಪರ್ಣ ಕಾಂಪ್ಲೆಕ್ಸ್, 1ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560 009.

**ವ್ಯವಹಾರ** : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.

**ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.**

1995-96ನೇ ಸಾಲಿನಲ್ಲಿ ಷೇರು ಬಂಡವಾಳ :
ಸದಸ್ಯರಿಂದ ರೂ. 8.80 ಲಕ್ಷ
ಸರ್ಕಾರದಿಂದ ರೂ. 14.32 ಲಕ್ಷ
**ಒಟ್ಟು ರೂ. 23.12 ಲಕ್ಷ**

| | | |
|---|---|---|
| 1. ಸದಸ್ಯರ ಸಂಖ್ಯೆ | : | 5445 |
| 2. ಸಗಟು ಮತ್ತು ಚಿಲ್ಲರೆ ಮಾರಾಟ | : | ರೂ. 2507.07 ಲಕ್ಷ |
| 3. ಆಪದ್ಧನ | : | ರೂ. 16.47 ಲಕ್ಷ |
| 4. ಇತರೆ ನಿಧಿಗಳು | : | ರೂ. 24.93 ಲಕ್ಷ |
| 5.1995-96 ರಲ್ಲಿ ನಿವ್ವಳ ಲಾಭ | : | ರೂ. 4.11 ಲಕ್ಷ |

**ಸದಸ್ಯರಿಗೆ ಸೌಲಭ್ಯಗಳು**

ಅ. ಕೊಳ್ಳುವ ಪದಾರ್ಥದ ಮೇಲೆ ಶೇ. 2 ರಿಯಾಯಿತಿ
ಆ. ಷೇರಿನ ಮೇಲೆ ಸೇ. 9 ಷೇರು ಲಾಭಾಂಶ

**ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳನ್ನು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಹಾಗೂ ಸೋಮೇಶ್ವರಪುರದಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್‌ಗಳಿವೆ.**

**ಕಾರ್ಯಕಾರಿ ಮಂಡಳಿಯ ಸದಸ್ಯರುಗಳು**

**ಶ್ರೀ ಬಿ. ಟಿ. ಉಮೇಶ್** ಅಧ್ಯಕ್ಷರು
**ಶ್ರೀ ಆರ್. ನೀಲಕಂಠಯ್ಯ** ಉಪಾಧ್ಯಕ್ಷರು
**ಶ್ರೀ ಆ. ಪ್ರಸನ್ನಕುಮಾರಸ್ವಾಮಿ** ಪ್ರಧಾನ ವ್ಯವಸ್ಥಾಪಕರು

**ನಿರ್ದೇಶಕರು**

ಶ್ರೀ ಬಿ. ಎಸ್. ಪರಮಶಿವಯ್ಯ, ಶ್ರೀ ಎಲ್. ಎಸ್. ಕುಮಾರಸ್ವಾಮಿ, ಶ್ರೀ ಗುರುನಂಜಯ್ಯ, ಶ್ರೀ ಜಿ. ಶಿವಕುಮಾರ್, ಶ್ರೀ ಎಲ್. ರಾಜಪ್ಪ, ಶ್ರೀ ಹೆಚ್. ಎಸ್. ಶಿವಲಿಂಗಯ್ಯ, ಶ್ರೀ ಬಿ. ಎಂ. ಶ್ರೀಕಂಠಸ್ವಾಮಿ, ಶ್ರೀ ಬಿ. ಜಿ. ನಾಗಬಸಪ್ಪ, ಶ್ರೀಮತಿ ಎಸ್. ಗಿರಿಜ, ಶ್ರೀಮತಿ ಲೋಕಮಾತಾ ಶಿವಣ್ಣ ಸ.ನಾ.ನಿ, ಶ್ರೀ ಟಿ. ಆರ್. ರಾಜಶೇಖರಯ್ಯ ಸ.ನಾ.ನಿ. ಶ್ರೀ ಬಿ. ಟಿ. ಹೊರಕೇರಿ ಸ. ನಾ.ನಿ. ಶ್ರೀ ಎಸ್. ಎನ್. ಅನಂತಮೂರ್ತಿ ಬಿ.ಡಿ.ಸಿ.ಸಿ. ಪ್ರ.



"ಮಾಟಕೂಟ" ಎಂಬ ಮಾತು ಕೇಳಲಾಗದು, ಶಿವಾ ಶಿವಾ!
ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು
ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ
ಮಾಡಿಸಿಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ
ಮಾಟ ಸುಯಿದಾನದ ಕೇಡು! ಬಂದ
ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ
ಕೂಡಲಸಂಗಮದೇವಾ.

-- ಶ್ರೀ ಬಸವೇಶ್ವರ

# ಆರಾಧ್ಯ ಅಂಡ್ ಆರಾಧ್ಯ ಬಿಲ್ಡರ್ಸ್ ಪ್ರೈ. ಲಿಮಿಟೆಡ್

21/2, ಆರಾಧ್ಯ ಕಾಂಪ್ಲೆಕ್ಸ್,
ವಾಣಿವಿಲಾಸ ರಸ್ತೆ,
ಬೆಂಗಳೂರು-560 004.

ದೂರವಾಣಿ :
ಕಛೇರಿ : 623773
ಮನೆ : 262455

" SIDDAGANGA MONTHLY Reg. No. KRNQ - 9

## ಶ್ರೀ ಸಿದ್ಧಗಂಗಾ ಬಸವತತ್ವ ಪ್ರಯೋಗ ಶಾಲೆ
## ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸ್ಮಾರಕ ಸೌಧಗಳು



ನೂತನ ಮಹಾದಾಸೋಹ ಪ್ರಸಾದ ನಿಲಯ



ನೂತನ ಬೃಹತ್ ವಸತಿ ಮಂದಿರ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ - 572 104.